# ಶ್ರೀ ರಾಘವೇಂದ್ರ ಗುರುಚರಿತೆ

ರಚಯಿತ :
ಕೊರಿಗನೂರು ದೇವೇಂದ್ರರಾವ್

ಪ್ರಕಾಶಕರು :
ಶ್ರೀ ಗುರುರಾಜರ ಭಕ್ತರು

ಸಂಪಾದಕ :
ಜೆ. ಹೆಚ್. ಬಿ. ಆಚಾರ್ಯ
ಬಳ್ಳಾರಿ - ಬೆಂಗಳೂರು.

# ಶ್ರೀ ರಾಘವೇಂದ್ರ ಗುರುಚರಿತೆ

ರಚಯಿತ :
**ಕೊರಿಗನೂರು ದೇವೇಂದ್ರರಾವ್**

ಪ್ರಕಾಶಕರು :
**ಶ್ರೀ ಗುರುರಾಜರ ಭಕ್ತರು**

ಸಂಪಾದಕ :
**ಜೆ. ಹೆಚ್. ಬಿ. ಆಚಾರ್ಯ**
ಬಳ್ಳಾರಿ – ಬೆಂಗಳೂರು.

ದ್ವಿತೀಯ ಮುದ್ರಣ

೧೦೦೦ ಪ್ರತಿಗಳು — ೧೯೬೪

**ಬೆಲೆ ೫೦ ಪೈಸೆ**

ಪ್ರತಿಗಳಿಗೆ :-

**ಜೆ. ಹೆಚ್. ನರಸಿಂಹಮೂರ್ತಿ**

೩. ಟೆಂಪಲ್ ರೋಡ್, ೮ನೇ ಕ್ರಾಸ್,

ಮಲ್ಲೇಶ್ವರಂ, ಬೆಂಗಳೂರು-೩.

ಮುದ್ರಕರು :

**ಶ್ರೀ ಸುಧೀಂದ್ರ ಮುದ್ರಣಾಲಯ**

ಮಲ್ಲೇಶ್ವರಂ, ಬೆಂಗಳೂರು-೩.

॥ ಶ್ರೀರಸ್ತು ॥

# ಮುನ್ನುಡಿ

## (ಸಂಪಾದಕೀಯ)

ಶ್ರೀ ರಾಘವೇಂದ್ರ ಗುರು ಚರಿತೆಯನ್ನು ಈವರಿಗೆ ಬಹು ಜನರು, ಬಹು ಭಾಷೆಗಳಲ್ಲಿ ಬಹು ವಿಧವಾಗಿ ಬಣ್ಣಿಸಿರುತ್ತಾರೆ. ಅಗಮ್ಯ ಮಹಿಮರ ಅವರ ಚರಿತ್ರೆಯನ್ನು ಮುಖ್ಯವಾಗಿ ಮಹಿಳೆಯರಿಗಾಗಿ ಹಾಡಿ ಪಾಡಲು ಸೌಕರ್ಯವಾಗುವಂತೆ ರಚಿತವಾಗಿರುವ ಕೃತಿಗಳು ಹಲವಾರು.

ಶ್ರೀ ಮಂತ್ರಾಲಯ ಪ್ರಭುಗಳ ಮಹಿಮೆಗಳನ್ನು ವರ್ಣಿಸುವ ಕೃತಿಗಳನ್ನೆರಡು ಪಂಗಡಗಳಾಗಿ ವಿಂಗಡಿಸಬಹುದು. ಮೊದಲನೆಯದಾಗಿ ಶ್ರೀ ಜಗನ್ನಾಥದಾಸರು, ಶ್ರೀ ವಿಜಯದಾಸರು, ಶ್ರೀ ಗೋಪಾಲದಾಸರು ಮುಂತಾದ ಅಪರೋಕ್ಷ ಜ್ಞಾನಿಗಳಿಂದ ರಚಿತವಾದ ಸುಳಾದಿಗಳು. ಎರಡನೇದಾಗಿ ನಮ್ಮಂಥ ಪಾಮರರಿಂದ ಅಭಿವರ್ಣಿತವಾದ ಪದ್ಯಮೂಲಿಕೆ, ಹಾಡುಗಳು ಸಾಮಾನ್ಯವಾಗಿ ಶ್ರೀ ಗುರುರಾಜರ ಪಲ್ಲಕೀ ಸೇವಾ ಕಾಲದಲ್ಲಿ ದಾಸರ ಪದಗಳನ್ನೇ ಹಾಡುವ ಸತ್ಸಂಪ್ರದಾಯವು ಕಂಡುಬಂದಿದೆ. ಇದರ ಪ್ರಾಧಾನ್ಯತೆಗೆ ಕಾರಣವೆಂದರೆ ಅದು ಕೇವಲ ಗುರುಗುಣ ಸ್ತವನವಾಗಿರುತ್ತದೆ. ಇತರ ಕೃತಿಗಳಲ್ಲಿ ಕವಿಯ ಲೋಕಾನುಭವ, ಕಷ್ಟಸಂಕಷ್ಟಗಳು, ಬವಣೆಗಳು, ಬಯಕೆಗಳು ಮುಂತಾದ ಇಹಲೋಕದ ವ್ಯಾಪಾರಕ್ಕನುಗುಣವಾದ ವಿಷಯ ಸಂಮಿಳಿತವಾಗಿರುತ್ತದೆ. ಎಲ್ಲಾ ಇತರ ಕೃತಿಗಳು ಹೀಗೆಂದಲ್ಲ. ಹಲವಾರು ಉತ್ತಮ ರಚನೆಗಳು ಇರುವುದು ಸುಜನರಿಗೆ ಕಂಡುಬಂದಿದೆ.

ಕೂರಿಗನೂರು ಶ್ರೀ ದೇವೇಂದ್ರ ರಾಯರಿಂದ ರಚಿತವಾದ "ಶ್ರೀ ಗುರು ಚರಿತೆ" ಮೊದಲನೇ ದರ್ಜೆಗೆ ಸೇರಿದುದೆಂಬುದಾಗಿ, ನಿರ್ಮತ್ಸರ ಬುದ್ಧಿ

ಯುಳ್ಳವರಿಗೆ ತೋರುವುದರಲ್ಲಿ ಸಂಶಯವಿಲ್ಲ. ರಚನೆಯು, ಸರಳ, ಸುಂದರ, ಸುಲಭ ಶ್ರಾವ್ಯವಾಗಿರುವುದಲ್ಲದೆ, ಪಠಿಸಲು ಸೌಕರ್ಯವಾಗಿರುವುದು ಓದು ಗರು ಕಾಣಬಹುದು. ಕೀರ್ತಿ ಶೇಷರಾದ ಶ್ರೀ ದೇವೇಂದ್ರರಾಯರು ಶ್ರೀ ಗುರುರಾಜರ ಪೂರ್ಣಾನುಗ್ರಹಕ್ಕೆ ಪಾತ್ರರಾದ ವರ ಕವಿಗಳೆಂದು ಹೇಳುವು ವತಿಶಯೋಕ್ತಿಯಲ್ಲ.

ಅಲ್ಪಜ್ಞನಾದ ನಾನು "ಶ್ರೀ ಗುರುಚರಿತ್ರೆ"ಯನ್ನು ಕರ್ಣಾಟಾಂಧ್ರ ಭಾಷೆಗಳಲ್ಲಿ, ಗದ್ಯದಲ್ಲಿಯು, ಪದ್ಯಾತ್ಮಕವಾಗಿಯು ರಚಿಸಿರುತ್ತೇನೆ! ಶ್ರೀ ರಾಯರ ಅವತಾರತ್ರಯದ ಕಥಾವಸ್ತುವನ್ನೇ "ಶತಕ" ರೂಪವಾಗಿ "ಗೀತಾ" ವೃತ್ತದಲ್ಲಿ ರಚಿಸಿ ಈಚೆಗೆ ಪ್ರಕಟಿಸಲಾಗಿದೆ. ಈ ಚರಿತ್ರೆಯ ಕಥಾವಸ್ತುವು ಒಂದೇ ಆಗಿದೆ. "ಭಾಮಿನೀ ಷಟ್ಪದಿ" ವೃತ್ತದಲ್ಲಿರುವುದರಿಂದ, ನಿತ್ಯ ಪಾರಾಯಣೆಗೆ ಮಹಿಳೆಯರಿಗೆ ಹೆಚ್ಚು ಅನುಕೂಲವಾಗಿದೆ! ಶ್ರೀ ರಾಯರ ಭಕ್ತವೃಂದದಲ್ಲಿ ಸ್ತ್ರೀಯರೇ ಹೆಚ್ಚು ಹೆಚ್ಚಾಗಿರುವುದರಿಂದ, ಕೃತಿಕರ್ತರ ಈ ಕೃತಿ ಸಾರ್ಥಕವು, ಫಲಪ್ರದವೂ ಆಗಿರುತ್ತದೆ.

ಎನ್ನ ಸನ್ಮಿತ್ರರಲ್ಲಿ ಒಬ್ಬರಾದ ಶ್ರೀ **ಉತ್ತನೂರು ನಾರಾಯಣ ರಾಯರು** ನಾನು ರಚಿಸಿದ "**ಶ್ರೀ ರಾಘವೇಂದ್ರ ಶತಕಕ್ಕೆ**" ಮುದ್ದಾದ ಮುನ್ನುಡಿಯನ್ನು ಬರೆದು ಶ್ರೀ ಗುರುರಾಜರ ಭಕ್ತಲೋಕಕ್ಕೆ ಸುಪರಿಚಿತರಾಗಿ ದ್ದಾರೆ. ಇವರು ಈ ಕೃತಿಕರ್ತರಾದ **ಶ್ರೀ ದೇವೇಂದ್ರರಾಯರ ಸೋದ ರಳಿಯಂದಿರು.** ಇವರ ಶಿಷ್ಯಳಾದ ನನ್ನ ಸೌ|| ವತಿ ಈ ಕೃತಿಯ ಪ್ರತಿ ಯೊಂದನ್ನು ಅಪೇಕ್ಷಿಸಿದಾಗ ಒಂದು ಪ್ರತಿಯನ್ನು ಕಳಿಸುವುದಲ್ಲದೆ ಅವಕಾಶ ವಿದ್ದಲ್ಲಿ ಪುನರ್ ಮುದ್ರಣ ಮಾಡಬೇಕೆಂಬುದಾಗಿ ಸೂಚಿಸಿದರು. ನಾವು ಅಸ್ವತಂತ್ರರಲ್ಲವೇ ? ಆ ಭಾರವನ್ನು ಶ್ರೀ ರಾಯರ ಮೇಲೆ ಹಾಕಿ ಸಮ್ಮತಿ ಯನ್ನು ತಿಳಿಸಿದೆ. ಶ್ರೀ ನಾರಾಯಣರಾಯರು ಉತ್ತಮ ವಿಮರ್ಶಕರು. ತ್ರಿಭಾಷಾ ಕೋವಿದರು. ಅಪರಿಚಿತರಾದ ಕೃತಿಕರ್ತರ ಪರಿಚಯ ಮಾಡಿಕೊಡ ಬೇಕೆಂದು ಕೋರಿದೆ. ಅವರ ಪರಿಚಯ ವಾಕ್ಯಗಳನ್ನು ಬರೆದು, ಪುನರ್ ಮುದ್ರಣಕ್ಕೆ ಅನುಮತಿಯಿತ್ತ ಶ್ರೀ ನಾರಾಯಣರಾಯರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು

ಶ್ರೀ ಗುರು ಸಾರ್ವಭೌಮರ ಪುಣ್ಯರಾಶಿ ಅನಂತವಾದುದು. ಅವರ ಭಕ್ತಕೋಟಿಯು ಅಮಿತವಾದುದು. ಗುರುಚರಿತ್ರೆ ಹಾಗೂ ವೇದಾಂತ ವಿಷಯಕ ಕೃತಿಗಳ ಪ್ರಕಾಶಕರು ಅತಿವಿರಳ ಹಾಗೂ ದುರ್ಲಭವಾಗಿರುವುದು ಗಮನಾರ್ಹವಾದ ವಿಷಯ.

**"ಕೃತಿ ಪ್ರಕಾಶನವು ಶ್ರೀ ಗುರುರಾಜರ ಸೇವೆಯೆಂಬ ಭಾವನೆ ಬಂದಲ್ಲಿ ಕೃತಿಗಳು ಬಹು ಬೇಗನೆ ಹೊರಬರಲು ಸಾಧ್ಯವಾದೀತು!"**

ಈ ಕೃತಿ ಪ್ರಕಾಶನವೆಂದರೆ ಪುನರ್ಮುದ್ರಣಕ್ಕೆ ಶ್ರೀ ಗುರುರಾಜರ ಸೇವೆಯೆಂಬ ದೃಷ್ಟಿಯಿಂದ ಮುದ್ರಣ ದ್ರವ್ಯ ಸಹಾಯ ಮಾಡಿದ ಮಿತ್ರರಿಗೆ ಹಾಗೂ ಶ್ರೀ ಗುರುರಾಜರ ಭಕ್ತರಿಗೆ ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಇತೋಪ್ಯತಿಶಯವಾದ ಆಯುರಾರೋಗ್ಯ ಐಶ್ವರ್ಯಗಳನ್ನು ದಯಪಾಲಿಸಿ ಸಂರಕ್ಷಿಸಲೆಂಬುದಾಗಿ ಭಕ್ತವತ್ಸಲರಾದ ಶ್ರೀ ರಾಯರಲ್ಲಿ ಪ್ರಾರ್ಥಿಸಿ ಪ್ರಕಾಶಕ ವೃಂದಕ್ಕೆ ನನ್ನ ಧನ್ಯವಾದಗಳನ್ನರ್ಪಿಸುತ್ತೇನೆ.

ಮುದ್ರಣದ ಜವಾಬ್ದಾರಿಯನ್ನು ಬಲ್ಲವರಾದ ಭದ್ರಗಿರಿ ಸೋದರರು ಈ ಕೃತಿಯನ್ನು ಶೀಘ್ರದಲ್ಲೇ ಮುದ್ದಾಗಿ ಮುದ್ರಿಸಿ ಶ್ರೀ ಗುರುರಾಜರ ಕೃಪೆಗೆ ಪಾತ್ರರಾಗಿರುತ್ತಾರೆ ಮಿತ್ರರಾದ **ಶ್ರೀ ಸರ್ವೋತ್ತಮ** ಪೈಗಳ ಸಹೃದಯತೆಗೆ ಧನ್ಯವಾದಗಳು.

ರಾಯ! ಸನ್ಮಿತ್ರ! ವಿಬುಧ! **ನಾರಾಯಣಾರ್ಯ**!
ಬಯಸಿದಂತೆಯೆ "**ಗುರು** ಕೃತಿ" ಪ್ರಚುರವಾಯ್ತು
ನೆರವು ನೀಡಿದ ಭಕ್ತರಂ ಕರುಣೆಯಿಂದ
**ರಕ್ಷಿಸಲಿ ಭಕ್ತವತ್ಸಲ! ರಾಘವೇಂದ್ರ!**

ಬೆಂಗಳೂರು.
9-1-1969

ವಿದ್ವಜ್ಜನ ವಿಧೇಯ.
**ಜೆ. ಹೆಚ್. ಬಿ. ಆಚಾರ್ಯ**

|| ಶ್ರೀ ||

# ಪರಿಚಯವಾಕ್ಯಗಳು

by

**ಉತ್ತನೂರು ನಾರಾಯಣರಾವ್, ವಿದ್ವಾನ್.**
ಪ್ರಧಾನಾಂಧ್ರ ಪಂಡಿತರು, ಪರಿಷನ್ಮಹೋನ್ನತ ಪಾಠಶಾಲೆ
ರಾಯದುರ್ಗ - ಅನಂತಪುರ ಜಿಲ್ಲೆ - ಆಂಧ್ರಪ್ರದೇಶ್.

ಶ್ರೀ ರಾಘವೇಂದ್ರ ಶತಕ ಕರ್ತರು ಕೀ|| ಶೇ|| ದೇವೇಂದ್ರರಾಯರು. ಇವರು ನನ್ನ ಸೋದರ ಮಾವಂದಿರಲ್ಲಿ ಹಿರಿಯರು. ಮೈಸೂರು ರಾಷ್ಟ್ರ ಬಳ್ಳಾರಿ ಜಿಲ್ಲೆ - ಸಿರಿಗುಪ್ಪೆ ತಾಲ್ಲೂಕು "ಕೂರಿಗನೂರು" ಇವರ ಜನ್ಮಸ್ಥಳವು.

ದೇವೇಂದ್ರರಾಯರ ವಿದ್ಯಾಭ್ಯಾಸವು ಹಳ್ಳಿಯ "ಅಯ್ಯನವರ" ಶಾಲೆಯಲ್ಲಿ ಜರುಗಿತು. ಪ್ರಾಥಮಿಕ ವಿದ್ಯಾಭ್ಯಾಸಾನಂತರ ಅವರು ಅನೇಕ ವರ್ಷಗಳ ಕಾಲ "ಮೀಸ"ಲಾಗಿದ್ದ ತಮ್ಮ ಸ್ವಗ್ರಾಮದ "ರೆಡ್ಡಿ" ಉದ್ಯೋಗವನ್ನು ದಕ್ಷತೆಯಿಂದ ನಿರ್ವಹಿಸಿ ಹೆಸರಾಂತರಾದರು. ಔದ್ಯೋಗಿಕ ಕಾರ್ಯಭಾರವನ್ನು ವಿಜ್ಞತೆಯಿಂದ, ವಿಚಕ್ಷಣತೆಯಿಂದ ನಿರ್ವಹಿಸುತ್ತಾ, ವಿರಾಮ ಕಾಲವನ್ನು ಕನ್ನಡ ಕಾವ್ಯಾವಲೋಕನೆ- ಅವಗಾಹನೆ ಪರಿಶೀಲನೆಗಳಿಗೆ ವಿನಿಯೋಗಿಸಿ ದೇವೇಂದ್ರಾಖ್ಯರು ಅನತಿ ಕಾಲದಲ್ಲಿ ಅವರಲ್ಲಿ ಸುಪ್ತವಾಗಿದ್ದ ಕವಿತಾ ಶಕ್ತಿಯು ಹೊರಹೊಮ್ಮಲು ಕೂರಿಗನೂರು ರಾಯರು ಕವಿತಾ ರಚನೆಗುಪಕ್ರಮಿಸಿ "ಕೂರ್ಮಶತಕ"ವೆಂಬ ಭಕ್ತಿ ಶತಕವನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿ ಅದನ್ನು ಮುದ್ರಿಸಿದರು. ಈ ಶತಕವು ಭಕ್ತಿ ಭಾವ ಬಂಧುರವಾಗಿ ಶೈಲೀ ಸಾರಳ್ಯ ಸಂಪನ್ನವಾಗಿ ಶ್ರುತಿಪೇಯವಾಗಿ ಸಾಗಿದೆ; ಜನಪ್ರಿಯವಾಗಿದೆ. ಪ್ರತಿಭಾವ್ಯುತ್ಪತ್ತಿಗಳ ಸಮೀಚೀನ ಸಮ್ಮೇಳನಾ ಪ್ರಭಾವದಿಂದ ಸುಪ್ರಸಿದ್ಧ ಕನ್ನಡ ಮಹಾ ಕಾವ್ಯಗಳ ಅರ್ಥ ವಿವರಣೆಯಲ್ಲಿ ಶ್ರೀ ರಾಯರಿಗೆ

ಸದೃಶರಾದವರು ಆ ಪ್ರಾಂತ್ಯದಲ್ಲಿ ಅವರ ಕಾಲದಲ್ಲಿ ಮತ್ತಿನ್ನಾರೂ ಇರಲಿಲ್ಲವೆಂದರೆ ಅತ್ಯುಕ್ತಿಯಾಗಲಾರದು. "ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರ"ವಾಗುವುದಲ್ಲವೆ !- ದೇವೇಂದ್ರರಾಯರು ಗದುಗಿನ ಭಾರತವನ್ನು ವಾಚನ ಮಾಡುತ್ತಿದ್ದಾಗ ಕವಿ ಕುಮಾರವ್ಯಾಸನು ಸಹೃದಯಶ್ರೋತರ ಮನೋ ನಯನಗಳ ಮುಂದೆ ನಿಂದು ಹರ್ಷೋತ್ಕರ್ಷದಿಂದ ಕುಣಿಯುತ್ತಿದ್ದ ನೆಂದರೆ ಅತಿಶಯೋಕ್ತಿ ಆಗಲಾರದು. ಅವರು ತಮ್ಮ ಮೇಘ ಗಂಭೀರ ಕಂಠ ದಿಂದ – ಗಮಕ ಹೊಳೆಯ ಹೊಳಪುಗಳಿಂದ – ತಮ್ಮ ಪ್ರತಿಭಾವ್ಯುತ್ಪತ್ತಿ ಗಳ ಬೆಳಕುಗಳಿಂದ ಅರ್ಥ ವಿವರಣೆಯನ್ನು ಮಾಡುತ್ತಿದ್ದಾಗ ರೋಮಾಂಚನ ಗೊಳ್ಳದೆ – ತಲೆತೂಗದ ಶ್ರೋತನೊಬ್ಬನಿಲ್ಲ.

ಪ್ರಾಪಂಚಿಕ ಸುಖಗಳನ್ನು ಸಾಕಷ್ಟು ಅನುಭವಿಸಿ. "ಇಹಸಂಸಾರೇ ಬಹು ದುಸ್ಸಾರೇ"- ಎಂಬುದನ್ನರಿತು "ಕೃಪಯಾಪಾರೇ ಪಾಹಿಮುರಾರೇ !" ಎಂದು ಶ್ರೀಹರಿಯನ್ನು ಪ್ರಾರ್ಥಿಸಿ ಭಕ್ತಿಮಯವಾದ ಬಾಳನ್ನು ಬೆಳಗಿದವರು ಶ್ರೀ ದೇವೇಂದ್ರರಾಯರು. ಪದುಮನಾಭನ ಭಜನೆಯಲ್ಲಿನ ಪರಮ ಸುಖ ವನ್ನರಿತು ಮೈಮರೆತು ಭಜನೆ ಮಾಡಿ ಅವನ ಅನುಪಮಾನುಗ್ರಹವನ್ನರ್ಥಿಸಿ ದವರು "ಕೂರಿಗನೂರು ರಾಯರು".

ಶ್ರೀ ಮಂತ್ರಾಲಯ ಪ್ರಭುಗಳಾದ ಶ್ರೀ ರಾಘವೇಂದ್ರ ಯತೀಂದ್ರರಲ್ಲಿ ಅವರ ಭಕ್ತಿ ಅಚಂಚಲವಾದುದು. ಶ್ರೀ ಗುರುರಾಜರು ಅಪರೋಕ್ಷೀಕೃತ ಶ್ರೀಶರೂ ಶರಣರ ಸುರಭೂಜರಲ್ಲವೇ!! ಕೃಪಾಸಾಂದ್ರರಾದ ಶ್ರೀ ಮಂತ್ರಾಲಯ ಗುರು ಸಾರ್ವಭೌಮರ ಅವತಾರ ತ್ರಯದ ಮಹಾ ಮಹಿಮೋದಧಿಯನ್ನು "ಶ್ರೀ ರಾಯ"ರು ಬಣ್ಣಿಸಿದ ಶತಕವೇ "ಶ್ರೀ ರಾಘವೇಂದ್ರ ಶತಕವು".

ಇದು ಮುದ್ರಿತವಾಗಿ ಅನೇಕ ವರ್ಷಗಳಾದುವು. ನನ್ನ ಸಚ್ಛಿಷ್ಯಳೂ ಸಾತ್ವಿಕ ಸಾಹಿತ್ಯ ಪ್ರೇಮಿಯೂ, ಸನ್ಮಿತ್ರರಾದ ಭಕ್ತಕವಿ ಶ್ರೀ ಭೀಮಾ ಚಾರ್ಯರ ಧರ್ಮಪತ್ನಿಯಾದ ಸೌ|| ಕು|| ಸುಮಿತ್ರಾಬಾಯಿಯವರ ಮುಂದೆ ಈ ಶತಕವನ್ನೊಂದು ಸಲ ಓದಿದ್ದೆನು. 24 ವರ್ಷಗಳನಂತರ ನನ್ನ ಶಿಷ್ಯಳು

ಈ ಶತಕದ ಪ್ರತಿಯನ್ನು ಕಳುಹಿಸಬೇಕೆಂದು ತಮ್ಮ ಪತಿಯ ಮೂಲಕ ಕೋರಿದರು. ಅತಿ ಪ್ರಯಾಸದಿಂದ ಅದರ ಪ್ರತಿಯನ್ನೊಂದನ್ನು ಸಂಪಾದಿಸಿ ಶ್ರೀ ಭೀಮಾಚಾರ್ಯರಿಗೆ ಅದನ್ನು ತಲುಪಿಸುತ್ತಾ ಅನುಕೂಲವಿದ್ದಲ್ಲಿ ಈ ಶತಕದ ಪುನರ್‌ಮುದ್ರಣೆಗೆ ಪ್ರಯತ್ನಿಸಿ ಪುಣ್ಯ ಭಾಗಿಗಳಾಗಬೇಕೆಂದು ಅವರನ್ನು ನಾನು ಕೋರಿದೆನು. ಶ್ರೀ ಗುರುರಾಜರನ್ನು ಕುರಿತ ಸಾಹಿತ್ಯವನ್ನು ಶಕ್ತಿ ವ್ಯಂಚನೆಯಿಲ್ಲದೆ ಸದ್ಭಕ್ತಿ ಯುಕ್ತವಾಗಿ ಸಂಪೋಷಿಸುತ್ತಿರುವ ಶ್ರೀ ಭೀಮಕವಿಗಳು "ನಾಸ್ತಿ" ಎನ್ನುವರೇ!! ಆಲಸ್ಯವಿಲ್ಲದೆ "ಅಸ್ತು" ಎಂದುತ್ತರ ನಿತ್ತರು ಅತ್ಯಾನಂದದಿಂದ. ಅವರ ಪ್ರಯತ್ನ ಮೂಲಕ ಈ ಶತಕವು ಪುನರ್ ಮುದ್ರಣಾ ಭಾಗ್ಯವನ್ನು ಪಡೆದಿದೆ. ಶ್ರೀ ಗುರುರಾಜರ ಭಕ್ತ ಪರಂಪರೆಗೆ ಪರಮ ಸಂತೋಷವನ್ನು ನೀಡುತ್ತಿದೆ.

ಶ್ರೀ ಭೀಮಕವಿಗಳೂ ಅವರ ಸತೀಮಣಿಯೂ ಸುಕೃತಿಗಳು. ಶ್ರೀಹರಿ ಗುರುಗಳ ಪೂರ್ಣಾನುಗ್ರಹ ಸಂಪತ್ತಿಯಿಂದ ಈ ಆದರ್ಶ ದಂಪತಿಗಳು ಸುದೀರ್ಘಾಯುರಾರೋಗ್ಯ ಭಾಗ್ಯಗಳಿಂದ ಬಾಳಲಿ, ಭಕ್ತಲೋಕಕ್ಕೆ ಸಮಸ್ತ ಸನ್ಮಂಗಳಗಳನ್ನು ಶ್ರೀ ಗುರುರಾಜರನುಗ್ರಹಿಸಲಿ.

|| ಶುಭಂ ಭೂಯಾತ್ ||

ರಾಯದುರ್ಗ
15-12-1968.

ಶ್ರೀ ಗುರುರಾಜರ ಪಾದಸೇವಕ
**ಉತ್ತನೂರು ನಾರಾಯಣರಾವ್**

|| ಶ್ರೀ ಸೀತಾರಾಮಚಂದ್ರಾಯನಮಃ ||

# ಶ್ರೀ ರಾಘವೇಂದ್ರಗುರುಚರಿತೆ.

ಶ್ರೀ ಗಣಪ ವಿಶ್ವಂಭರಾಖ್ಯನೆ |
ಯೋಗಿಪರತೀರ್ಥೈಕಪೂಜಿತ |
ಭೋಗಿಶಯನನೆ ಮೂಲರಾಮನೆ ಬಿಡದೆ ವಂದಿಸುವೆ ||
ಸಾಗರಜೆ ವಿಧಿ ವಾಯು ಭಾರತಿ |
ನಾಗವೈರಿ ಫಣೀಂದ್ರ ಶಿವರಿಗೆ |
ಬಾಗಿ ಕರಗಳ ಮುಗಿವೆ ಹರಿಷಣ್ಮಹಿಷಿಯರ ನುತಿಪೆ | ೧ ||

ಗರುಡ ಫಣಿಪತಿ ನೀಲಕಂಠರ |
ತರುಣಿಯರು ಸುರಪತಿ ರತೀಶರು |
ಗುರುವು ಸ್ವಾಹಂಕಾರಪ್ರಾಣರು ಸುಖವ ಪಾಲಿಸಲಿ ||
ವರಸ್ವಯಂಭುವು ಮುಖ್ಯ ದಕ್ಷೇ |
ಶ್ವರರು ಶಚಿ ರತಿ ಸರಸ ಹರಿಕಿಂ |
ಕರರು ಅನಿರುದ್ಧಾಧ್ಯರೆಲ್ಲರು ಕೊಡುಗೆ ಮಂಗಳವ || ೨ ||

ಪ್ರವಹ ನಾಸಿಕ ವಾಯು ಚಂದ್ರಮ |
ರವಿ ರವಿಜ ವರುಣಾದಿ ವರ್ಗವು |
ಕವಿ ವಿಭಾವಸುವುಂ ಪ್ರಸೂತಿಯು ಗಾಧಿಸುತ ಸಹಿತ ||
ನವ ಮುನೀಶ್ವರ ರೆಲ್ಲ ರೆನ್ನಗೆ |
ನವನವ ಸುಕವಿತಾ ಪ್ರಸಕ್ತಿಯ |
ಸವೆಯದಂದಲಿತ್ತು ಪೊರೆಯಲ್ಕೇಳಿ ನಮಿಸುವೆನು || ೩ ||

ಜಾತಿ ಯೌವನ ರೂಪು ಕುಶಲತೆ ।
ನೀತಿ ಶೀಲತೆ ಭಾಗ್ಯಸುಖ ಸಂ ।
ಜಾತಳಾದಾನಾರಿನಲ್ಲನ ನುಳಿದಿರಲ್ಕಿನ್ನು ॥
ಪಾತಕದೆ ಸಂಭವಿಪ ದುರಪ ।
ಖ್ಯಾತಿವೊಂದಿರುತಿರ್ಪ ತೆರದಿಂ ।
ಭೂತಳದಿ ಗುರುಃಭಕ್ತಿರಹಿತನ ಜನ್ಮವದು ವ್ಯರ್ಥ ॥ ೪ ॥

ಗುರುಸುಭಕ್ತಿ ವಿಹೀನರೆನು ಹರಿ ।
ಜರೆದು ಬಗೆವನು ನೀಚರೆಂದೇ ।
ಪರಿಕಿಸಲು ಹರಿ ತನ್ನ ಮರೆತರು ಗುರುಗಳನು ಭಜಿಸೆ ॥
ಪರಮ ಸಂತೋಷದಲಿ ಅವರನು ।
ಕರೆಸಿಕೊಳ್ಳುವ ತನ್ನ ಲೋಕಕೆ ।
ಅರರೆ ಶ್ರೀಹರಿಕರುಣ ವೆಂತುಟೊ ಹರಮಹಾದೇವ ॥ ೫ ॥

ಹಿಂದೆ ಶುಕ್ರನ ಮಾತು ಮೀರಲು ।
ಬಂದುದೊಡನೆಯೆ ಬಲಿಗೆ ಬಂಧನ ।
ವಿಂದಿಗೂ ಪಾತಾಳಲೋಕದೊಳಿರುವನವನಿನ್ನು ॥
ಮಂದಮತಿಗಳು ಮನದೊಳಿದ ತಾಂ ।
ತಂದು ನಿಜಭಕ್ತಿಯಲಿ ದಿನದಿನ ।
ಚಂದದಿಂದಲಿ ಮರೆಯದಲೆ ಭಜಿಸುವುದು ಗುರುವರನ ॥ ೬ ॥

ಎರಗುವೆನು ಯತಿರಾಜ ಮೌಳಿಗೆ ।
ಎರಗುವೆನು ಮಂತ್ರಾಲಯಾಧಿಪ ।
ಗೆರಗುವೆನು ಶ್ರೀಮುನಿಸುಧೀಂದ್ರರ ಹಸ್ತಕಮಲಜಗೆ ॥
ಎರಗುವೆನು ಭುವನೈಕಪೂಜ್ಯಂ ।
ಗೆರಗುವೆನು ಶ್ರೀರಾಘವೇಂದ್ರಂ ।
ಗೆರಗುವೆನು ವರಧರ್ಮಸತ್ಯವ್ರತಗೆ ಭಕ್ತಿಯಲಿ ॥ ೭ ॥

ಪದಮೊದಲು ವರವಗೌಳಿವರೆಗೂ ।
ಉದಿಪ ನಿಮ್ಮಯರೂಪ ರವಿ ಮ ।
ಧ್ಹೃದಯದಲಿ ನಿಲಲಾಗಳೋಡಿತು ದುಸ್ತತಿವಿರತತಿ ॥
ಉದಯವಾಯಿತು ಜ್ಞಾನವದು ಪದ ।
ಪದಕೆ ಧಾವಿಪುದುತ್ಸುಕತೆ ವೋಣ್ ।
ಬುಧವರೇಣ್ಯರ ಗುಣಮಹೋದಧಿ ರತ್ನ ಹುಡುಕಲ್ಕೆ ॥ ೮ ॥

ವಿಜಯನಗರದಿ ತಿಮ್ಮಭಟ್ಟಾ ।
ದ್ವಿಜನ ಗೌತಮಗೋತ್ರಜಾತನ ।
ನಿಜವನಿತೆ ಗೋಪಾಂಬಿಗರ್ಭಸುಸಿಂಧು ಚಂದ್ರಮನಂ ॥
ಗಜವರದ ವರ ವೇಂಕಟೇಶನ ।
ಭಜಿಸಿ ಮಗುವಂ ಪಡೆದರದರಿಂ ।
ಸುಜನ ವೇಂಕಟಭಟ್ಟನೆಂಬಾ ಪೆಸರೆನಿಡಲಾಯ್ತು ॥ ೯ ॥

ಗುರುಸುಧೀಂದ್ರರು ಶಿಷ್ಯಬೃಂದಕೆ ।
ವರಸುಧಾಗ್ರಂಥವನು ಪೇಳ್ವೊಡೆ ।
ಸರಿಯು ಪೋಗದೆ ಒಂದುಪದ ಸಂಶಯವು ಬಂದಾಗ ॥
ಮರುದಿವಸಕೀಪದ್ಯಕರ್ಥವ ।
ತ್ವರಿತದಿಂದನ್ವಯಿಸಿ ನೀವೆಂ ।
ದರುಹಿ ಆಜ್ಞೆಯನಿತ್ತುಪಾಠವ ನಿಲಿಸಿ ಕಳುಹಿದರು ॥ ೧೦ ॥

ಮೊದಲಿನಿಂದಾ ಸುಧೆಗೆ ಟೀಕೆಯ ।
ಪದಪದಕೆ ಬರೆಯುತ್ತ ಬಂದಾ ।
ಬುಧನು ವೇಂಕಟಭಟ್ಟನಾದಿನ ಕಠಿನತರ ಪದಕೆ ॥
ಹುದುಗಿದನ್ವಯ ಬರೆದು ಮರುದಿನ ।
ದುದಯಕಾಲಕೆ ಗುರುವಿಗೊಪ್ಪಿಸೆ ।
ಮುದದೊಳಿತ್ತರು ಪರಿಮಳಾಚಾರ್ಯಾಖ್ಯ ವರಬಿರುದ ॥ ೧೧ ॥

ಪಿರಿಯರಿಂ ಪೆಸರ್ಗೊಂಡ ಪಂಡಿತ ।
ಗುರುವರರ ಸನ್ನಾಮ ಭುವಿಯೆಳು ।
ಮೆರೆಯುತಿದೆ ಪರಿಮಳ ಸುಟೀಕಾಗ್ರಂಥ ಬರೆದುದರಿಂ ॥
ವರಸುಧೆಯ ಪೇಳ್ವಾಗ ನಿತ್ಯವು ।
ಪರಮಹಂಸರು ಪರಿಮಳೇಶಗೆ ।
ಶಿರವಬಾಗಿ ನಮಸ್ಕರಿಸುವರು ಭಕ್ತಿಭಾವದಲಿ ॥ ೧೨ ॥

ಪೃಥಿವಿಯೊಳ್ **ಮನ್ನಾರುಗುಡಿ**ಯಲಿ ।
ಪೃಥುಳವೈಯಾಕರಣಿ ಪಂಡಿತ ।
ನತುಳಮತಿ ಘನಭಾಷ್ಯಜಿಜ್ಞಾಸವನುಮಾಡಲ್ಕೆ ।
ಚತುರವಾಕ್ಯಾರ್ಥಗಳೊಳಾತನ ।
ಮಥಿಸಿ ಪರಿಮಳಕರ್ತ ಗೆಲ್ಲಲು ।
ಶ್ರುತವದಾಯಿತು ಶ್ರೀಸ್ವ**ಭಾಷ್ಯಾಚಾರ್ಯ**ಬಿರುದಾಂಕ ॥ ೧೩ ॥

ಕಂಡುಬರುತಿಹ ಪೃಥ್ವಿಪುಸಿಯೆಂ ।
ದಂಡಲೆವ ಅದ್ವೈತ ಧೀಮಣಿ ।
ಶೌಂಡನಾದಾ **ಯಜ್ಞನಾರಾಯಣ** ಸುದೀಕ್ಷಿತನ ॥
ಕಂಡುವಾದದೊಳವನ ಸೋಲಿಸಿ ।
ಪಂಡಿತಂಗಾತಪ್ತಮುದ್ರೆಯ ।
ದಂಡಿಚಂದ್ರ ಸುಧೀಂದ್ರರಲಿ ಕೊಡಿಸಿದನು ಗುರುರಾಯ ॥ ೧೪ ॥

ದೀಕ್ಷಿತನ ವಾದದಲಿ ಗೆಲ್ಲಲ ।
ಪೇಕ್ಷೆಯಿಂದಲಿ ಶ್ರೀ ಸುಧೀಂದ್ರರು ।
ತಕ್ಷಣವೆ ಶಿಷ್ಯಂಗೆ **ಭಟ್ಟಾಚಾರ್ಯ** ಬಿರುದಿತ್ತು ॥
ಲಕ್ಷಣಾಪತಿಪಾದಭಜಕ ಸ ।
ಲಕ್ಷಣದಿ ವೀಣೆಯನು ಬಾಜಿಪ ।
ದಕ್ಷನೆಂದೇ ಹಿಗ್ಗಿ ಕೊಂಡಾಡಿದರು ಮನದಣಿಯೇ ॥ ೧೫ ॥

ಗುರುಗಳಾಜ್ಞೆಯಕೊಂಡು ಸದಮಲ ।
ಗುರುವರರು ಗೃಹಮೇಧಿ ಯನಿಸಲು ।
ಸರಸ ಗುಣಮತಿ ಸತಿ ಸರಸ್ವತಿ ಎಂಬ ಸುದತಿಯನು ॥
ವರಿಸುತಲಿ ಸಂಸಾರದೊಳಿತ್ತು ।
ವಿರುತಿರಲು ಸಂಜನಿತವಾದುದು ।
ಪರಗತಿಯಸಾಧನೆಗೆ ಸಲ್ಲುವ ಪುತ್ರ ಸೌಭಾಗ್ಯ ॥ ೧೬ ॥

ದ್ವಿಜರ ಸಂತರ್ಪಣೆಯೊಳೊಂದೆಡೆ ।
ಬಿಜಯಮಾಡ್ದನು ವೇಂಕಟಪ್ಪನು ।
ಕುಜನ ರವರನು ನೇಮಿಸಿದರಾ ಗಂಧ ತೆಗೆವುದಕೆ ॥
ನಿಜವತಿಳುಹಲು ವಹ್ನಿಯನು ತಾಂ ।
ಭಜಿಸಿ ಗಂಧವ ತೆಗೆಯೆ ಲೇಪದಿ ।
ಸುಜನರೆಲ್ಲರು ತಾಪ ಗೊಂಡೊಡೆ ತಣ್ಪನೆಸಗಿದರು ॥ ೧೭ ॥

ದಯದಿ ವರುಣನ ಸೂಕ್ತ ಪೇಳ್ದನು ।
ನಯದಿ ತಾಪವ ಶಾಂತ ಗೊಳಿಸಲು ।
ಭಯ ಭರಿತ ಭಕ್ತಿಯಲಿ ಎಲ್ಲರು ಪದಕೆ ವಂದಿಸುತ ॥
ಜಯ ಸುಶಾಂತಿಯ ದಿವ್ಯಮೂರ್ತಿಯೆ ।
ಜಯ ಸುಶಾಸ್ತ್ರವ ಸಿದ್ಧಿಪಡೆದಿಹ ।
ಹಯವದನ ಪಾದಾಬ್ಜ ಭೃಂಗನೆ ಎಂದು ನುತಿಸಿದರೂ ॥ ೧೮ ॥

ವೀಣೆ ನುಡಿಯಿಸೆ ವೇಂಕಟಪ್ಪನು ।
ವೇಣುಧರ ಬ್ರಹ್ಮಾಣಿತಂತವು ।
ತಾಣಗಳ ನುಳಿದಿಲ್ಲಿ ಅನುದಿನವಿರ್ದು ಸುಖಿಸುತಿರೆ ।
ಏನಹೇಳಲಿ ಇದನು ಸಹಿಸದೆ ।
ಧೇನುಕಾಸುರ ವೈರಿದೇವಿಯು ।
ದೀನನಂ ಮಾಡಿದಳು ವೇಂಕಟಭಟ್ಟನಂ ಮುಳಿದು ॥ ೧೯ ॥

ಜ್ಞಾನಿಮಾನಿ ನಿಧಾನಿ ಪಂಡಿತ ।
ಗಾನಶೌಂಡನ ಕರೆಸಿ ಸಭೆಯಲಿ ।
ಸಾನುರಾಗದಿ ಶ್ರೀಸುಧೀಂದ್ರರು ಆಶ್ರಮವನಿತ್ತು ॥
ಜಾನಕೀವರ ಮೂಲರಾಮನ ।
ನೀನು ಪೂಜಿಸು ಸರ್ವಕಾಲದಿ ।
ಸೂನುನಿನ್ನಗೆ ರಾಘವೇಂದ್ರ ಸುತೀರ್ಥ ಪೆಸರಿರಲಿ ॥ ೨೦ ॥

ಎಂದು ಈಪರಿ ಪೇಳಿ ಗುರುಗಳು ।
ಬಂಧುರದ ಬಹುವಾದ್ಯ ಸಮಿತಿಯೊ ।
ಳಂದು ಮೆರೆಯಿಸಿ ದಿವ್ಯಚೌಷಷ್ಟ್ಯಾದಿ ವಿದ್ಯೆಗಳ
ಒಂದು ಬಿಡದೇ ಬೋಧಿಸುತೆ ಆ ।
ನಂದಪಟ್ಟರು ನೆರೆದ ದ್ವಿಜತತಿ ।
ತಂದು ಸುರಿದರು ಪಾದಕಾಣಿಕೆ ಗುರುವರಂಗಾಗ ॥ ೨೧ ॥

ಲೋಕಗುರು ಪತಿಯಾದನೆಂಬಾ ।
ವಾಕು ಕೇಳುತ ತೊರೆದು ಧೈರ್ಯವ ।
ಸಾಕು ಇಹಸುಖವೆನುತ ಸರಸತಿ ಸಾಧ್ವಿ ಗುರುಪತ್ನಿ ॥
ನೂಕಿ ತ್ಯಜಿಸಿದಳಂದು ದೇಹವ
ಸೋಕಿತಾಕ್ಷಣ ವಹಿತ ಮರಣದಿ ।
ಭೀಕರದ ಪೈಶಾಚಿ ಜನ್ಮವು ಕರ್ಮ ಬಲದಿಂದ ॥ ೨೨ ॥

ಅದನರಿದು ಶ್ರೀ ರಾಘವೇಂದ್ರರು ।
ಸುದತಿ ಗೊದಗಿದ ಭೂತಜನ್ಮವ ।
ಸವೆದು ತೇಜಃಪುಂಜ ತಮ್ಮಯ ತಪದ ಶಕ್ತಿಯಲಿ ॥
ಮುದವ ನೊಸಗುತೆ ಮಡದಿ ಗಾಕ್ಷಣ ।
ಸದಮಳ ಶ್ರೀಮೋಕ್ಷ ವಿತ್ತರು ।
ಪದುಳದಲಿ ಹರಿಸೇವಾಗ್ರಣಿಗೇನಸಾಧ್ಯವಿದೆ ॥ ೨೩ ॥

ಮೂಲಜಯ ದಿಗ್ವಿಜಯರಾಮರ ।
ನೀಲಸೇವಿತ ವಾಸುದೇವನ ।
ಲೋಲಸೈಕತ ಮುಷ್ಟಿ ಇವುಗಳ ನಿತ್ಯನಿತ್ಯದಲಿ ॥
ಮೇಲೆನಿಪ ಬಲಮುರಿಯ ಶಂಖದಿ ।
ಶೀಲವರ ವೇದೋಕ್ತ ನಿಯಮದಿ ।
ಕಾಲಕಾಲಕೆ ಪೂಜೆ ಗೈಯುವ ಧನ್ಯಗುರು ಪೊರೆಯೈ ॥ ೨೪ ॥

ವಾದಿಭೈರವ ವೀರಭದ್ರರ ।
ಕಾದಿ ಜಯಿಸಿದೆ ಮಾಯಿಗರ ನೀಂ ।
ಪಾದ ಕೆರಗಿಸಿಕೊಂಡು ಸಾಧನವಿತ್ತುಮನ್ನಿಸಿದೆ ॥
ಭೇದಮತವೇ ವೇದಸಮ್ಮತ ।
ವಾದು ದೆಂದಿಗು ವಾಯುಪೂಜಿತ ।
**ಮಾಧವನೆ ಸರ್ವೋತ್ತಮನು** ತಾನೆಂದು ಸಾರಿದೆಯೈ ॥ ೨೫ ॥

ವ್ಯಾಸತೀರ್ಥರ ಚಂದ್ರಿಕೆಗೆ ವರ ।
ಭಾಸುರದ ಟೀಕೆಯನು ಬರೆದಾ ।
ವಾಸುದೇವಾರ್ಚನೆಗೆ ಸಲ್ಲುವ **ತಂತ್ರದೀಪಿಕೆಯ** ॥
ಪ್ರಾಸ ಮುಕ್ತಾವಳಿಯ ನಿರುಪಮ ।
ಭಾಷೆಯಲಿ ಪೇಳ್ದಜ ಜನಕ ಗಾ ।
ಕೇಶವಂ ಗರ್ಪಿಸಿದೆ ಶ್ರೀಗುರು ರಾಘವೇಂದ್ರ ನಮೋ ॥ ೨೬ ॥

ಆದವಾನಿಯೊ ಳೋರ್ವ ಬಾಡಬ ।
ಸಾಧು **ವೇಂಕಣ** ನೆಂಬ ಬಡವನು ।
ಖೇದ ಪಡುತಿರೆ ನಿಮ್ಮ ದರುಶನದಿಂದ ಲಾಕ್ಷಣವೆ ॥
ಸಾದರದಿ ಶ್ರೀವಾಣಿ ಒಲಿದೊಡೆ ।
ಮೇದಿನೀಶಗೆ ಮಂತ್ರಿಯೆನಿಸಿದ ।
ಸೋದಿಸಲ್ ಶಿಷ್ಯರನ ನೀಪರಿ ಪೊರೆವರಾರುಂಟು ॥ ೨೭ ॥

ಮೃತ್ತಿಕಾಶೌಚವನು ಗೈಯುವ ।
ಪೊತ್ತಿನಲಿ ತಾಂ ಶಿಷ್ಯನೋರ್ವನು ।
ಉತ್ತಮರೆ ಕೊಡಬೇಕು ಧನವನು ಮದುವೆಗೆನೆ ನಕ್ಕು ॥
ಎತ್ತಿಕೊಳ್ಳೆನು ತಿತ್ತ ಮೃತ್ತಿಕೆ ।
ವಿತ್ತವಾಯಿತು ಭೃತ್ಯನಿಗೆ ಗಡ ।
ಮತ್ತೆ ನಿರ್ವಿಘ್ನದಲಿ ನಡೆಯಿತು ಮದುವೆ ಮುದದಿಂದ ॥ ೨೮ ॥

ಅಸುವಳಿದ ದೇಶಾಯಿ ಕುವರಗೆ ।
ಎಸಗಿದರು ಜೀವವನು ಭಳಿರೇ ।
ವಸುಧೆಯೋಳ್ ಶ್ರೀ ರಾಘವೇಂದ್ರರ ಕರುಣೆ ಗೆಣೆಯುಂಟೆ ॥
ಎಸೆವ ಪುಣ್ಯದ ರಾಶಿ ಯನುದಿನ ।
ಕಸಿಕಸಿದು ಬಳಸಿದರು ಸವೆಯದು ।
ಕುಶಲ ವೆಲ್ಲಹುದಿವರ ಮರೆತರೆ ಪಾಪಿಜೀವನಕೆ ॥ ॥ ೨೯ ॥

ಕನಕದಾಸನು ತಾರತಮ್ಯವ ।
ಮನನ ಮಾಡದೆ ನೀಚ ಕುಲದಲಿ ।
ಜನನ ವಾಗುತ ಮರುಗುತಲಿ ಕಾಲವನು ಕಳೆಯುತಿರೆ ॥
ಮುನಿವರನ ದರ್ಶನವ ಗೆಯ್ದಾ ।
ಬಿನುಗುಸಾಸಿವೆ ಸೇವೆಮಾಡಲು ।
ಜನುಮ ಮೂರರ ಪಾಪ ತೊಲಗಿತು ಗತಿಯು ಸಿದ್ಧಿಸಿತು॥೩೦॥

ಭಕ್ತಪತನೋದ್ಧರಣ ಚರಿತೆಯು ।
ವ್ಯಕ್ತವಾಗುವ ತೆರೆದೊಳಿಂದಿಗು ।
ಭುಕ್ತಿಯೋಗವದಾಯ್ತುಸಾಸಿವೆ ವ್ರತವಿಶೇಷದೊಳು ॥
ಶಕ್ತನಾದಪರೋಕ್ಷಜ್ಞಾನಿಗೆ ।
ಉಕ್ತವಲ್ಲವು ವಿಧಿ ನಿಷೇಧ ವ ।
ಯುಕ್ತವಾವುದು ಮಿಲ್ಲ ಕೃಷ್ಣಪದಾಬ್ಜನಿಷ್ಠನಿಗೆ ॥ ೩೧ ॥

ಇದಕೆ ಸಾಕ್ಷಿಯು ಬಿದುರುಹಳ್ಳಿಯು ।
ಬುಧನು ಚದುರನು ಶಾಸ್ತ್ರವೇತ್ತನು ।
ಮುದಮುನೀಶ್ವರ ಗ್ರಂಥಕೆಲವಕ್ಕಡುವೆ **ಟೀಕೆಯನು** ॥
**ವಿದಿತವಾಗಲು** ರಚಿಸಿ ರಾಯರ ।
ಸದಯಹೃದಯುವ ನಂಬಿನೋಡಲು ।
ಇದಿರೊಳಿಟ್ಟನು **ಶ್ರೀನಿವಾಸಾಚಾರ್ಯ**ನೆಂಬ ದ್ವಿಜ ॥ ೩೨ ॥

ಕುಶಲತೆಗೆ ಮೆಚ್ಚುತ್ತಬಂದಾ ।
ವಸುಧೆಸುರನಿಗೆ ರಾಘವೇಂದ್ರರು ।
ಎಸೆವ '**ತೀರ್ಥ**' **ಪದ್ಯೈಕ** ಬಿರುದಂ **ಪಾಲಿಸಿದ** ರೊಡನೆ ॥
**ಧಿಷಣವರ್ಯ**ರು ಪಙ್ಕ್ತಿ**ಭೋಜನ** ।
ವೆಸಗೆ **ಸಾಸಿವೆ ವ್ರತ**ದೊಳಾಗದು ।
ರಸವನುಳಿವೆನುಎಂದು ಬಿನ್ನಹಗೈದನಾ**ಚಾರ್ಯ** ॥ ೩೩ ॥

ಧೀಮತಿಯು ಸ್ವಗ್ರಾಮ ಸೇರುತೆ ।
ಆಮಹಾಮತಿ **ಯಾದವರ್ಯ** ।
ಸ್ವಾಮಿ ವಿದ್ಯಾಗುರುವಿ ಗಭಿವಂದಿಸಲು ಶಿಷ್ಯನಿಗೆ ॥
ತಾಮಸನೆ ಸ್ವೋತ್ತಮರ ದ್ರೋಹದಿ ।
ಹೋಮಿಸಿದೆ ನೇಮಾಗ್ನಿ ಗಾಯುವ ।
ರಾಮ ನಿನ್ನಯ ಮೋರೆ **ಕಳೆಗುಂದಿಹುದು** ಹೋಗೆಂದ ॥ ೩೪ ॥

ಫಲವು ಮಂತ್ರಾಕ್ಷತೆಯು ಕಪ್ಪಿವೆ ।
ನಿಲಲು ಬೇಡವು ತಿರುಗಿ ನಡೆಯುತೆ ।
ಒಲಿಸಿ ಕರುಣೆ ಯತೀಂದ್ರರಂ ಕ್ಷಮೆಯ ಬೇಡುವುದು ॥
ಕಲುಷದೂರರು ಮನ್ನಿಪರು ಎನೆ ।
ತಳಮಳಿಸಿ ಮರುಗುತ್ತ ಪೋದನು ।
ಘಳಿಲನೇ ಶ್ರೀರಾಘವೇಂದ್ರರ ಬಳಿಗೆ ಪಂಡಿತನು ॥ ೩೫ ॥

ಅಮ್ಮ ಗುರುಗಳು ಮತ್ತೆ ಇಲ್ಲಿಗೆ |
ನಿಮ್ಮನಂ ಕಳುಹಿದರೆ? ಬನ್ನಿರಿ |
ಬೊಮ್ಮನಯ್ಯನ ತೀರ್ಥನೈವೇದ್ಯಗಳ ನುಂಬುದಕೆ ||
ನಮ್ಮ ಜೊತೆಯಲಿ ಕುಳಿತು ಭುಜಿಸಿರಿ |
ಸುಮ್ಮನೇ ಶ್ರಮವಾಯ್ತು ಹರಿಹರಿ |
ಉಮ್ಮಳಿಸದಿರಿ ಧರ್ಮಸೂಕ್ಷ್ಮವ ನರಿತು ವರ್ತಿಪುದು || ೩೬ ||

ತಪ್ಪು ಎಂದರೆ ಕ್ಷಮಿಸು ಕರುಣದ |
ಕುಪ್ಪೆ ಈ ರಾಘಪ್ಪನಂತಹ |
ರಿಪ್ಪರೇ ಭೂವಲಯದಲಿ ನಾಂಕಾಣೆ! ನಾಂಕಾಣೆ ||
ತುಪ್ಪಕಡುಬನು ಹಾಕಿ ತಮ್ಮಲಿ |
ಬಪ್ಪ ಶರಣರ ಪಾಪಲೇಪದ |
ಕಪ್ಪುಕರೆಗಳ ಕಳೆದು ಉದ್ಧರಿಸುವರು ದಿನದಿನದಿ || ೩೭ ||

ಬಹುವಿಧದ ಮಾಹಾತ್ಮ್ಯತೋರಿಸಿ |
ಬಹುತರದ ವಾದಿಗಳ ಸೋಲಿಸಿ |
ಬಹುಕರುಣಿ ಎಂದೆನಿಸಿ ಬಹುಭಕ್ತರ ಸಮುದ್ಧರಿಸಿ ||
ಬಹುಶಯಃಕಿರಣಗಳ ಪಸರಿಸಿ |
ಬಹು ಜನಕೆ ಇಷ್ಟಾರ್ಥಸಲ್ಲಿಸಿ |
ಮಹಿಮರಿರ್ದರು ಕುಂಭಕೋಣದಿ ಪತಿತರನು ಸಲಹಿ || ೩೮ ||

ಮೋದ ಮತವರ ಚೂತವನಚಯ |
ಶ್ರೀದ ದಿವ್ಯವಸಂತನನುಪಮ |
ಸಾಧು **ಸುರುಚಿರ** ತತ್ತ್ವಭೋಧಾಮೋದ ದಾಯಕನಂ ||
ಆದರದಿ ನುತಿಸುವೆನು ಭಕುತಿಯ |
ಹಾದಿಯಲಿ ನಡೆದಾಡಿ ಸೆನ್ನಯ |
ಖೇದವನು ಕಳೆವುದಕೆ ಸುಮತಿಯನಿತ್ತು ಸಲಹುದಕೆ || ೩೯ ||

ತಂತ್ರದೀಪಿಕೆ ಪುರುಷಸೂಕ್ತವು ।
ಭ್ರಾಂತಿನಾಶಿನಿ ಗೀತೆ ಟಿಪ್ಪಣಿ ।
ಕಂತುಪಿತ ಶ್ರೀರಾಮಚಂದ್ರಸ್ತವನ ಮುಂತಾದ ॥
ಇಂತು ನಾಲ್ಕುಂಪತ್ತುನಾಲ್ಕು ಸ್ವ ।
ತಂತ್ರಕೃತಿಗಳ ಮಾಡಿ ಭಕ್ತರ ।
ಅಂತರಂಗವ ಶುದ್ಧಿಮಾಡಿದೆ ಮಂತ್ರಭವನದಲಿ ॥ ೬೦ ॥

ಪಿಂತೆಕಾಲದೊ ಳೊಂದುವೇಳೆ ನಿ ।
ರಂತರ ಕ್ಷಾಮದಲಿ ಪ್ರಜೆಗಳು ।
ಚಿಂತಿಸುತ್ತಿರೆ ಧಾನ್ಯರಾಶಿಯೊಳಮಿತ ದಯೆಯಿಂದ ॥
ಯಂತ್ರಶ್ರೀಚಕ್ರವನು ಬರೆಯುತ ।
ತಂತ್ರಪೂರ್ವಕ ಜಪಿಸಿ ಅಕ್ಷಯ ।
ವಾಂತಧಾನ್ಯದಿ ಜನವ ನೆಲ್ಲವ ಪೊರದೆ ಧೀಮಂತ ॥ ೪೧ ॥

ಪತಿತನಿಗೆ ಶಂಖೋದಕವ ಸು ।
ವ್ರತಿಯು ಸೇಚನೆಮಾಡಿ ಯವನಿಂ ।
ದತಿಭಿಕ್ಷವಕೊಳ್ಳೆ ಮೂರ್ಖರದಾಡಿಕೊಳಲಾಗ ॥
ವ್ಯತಿಕರವದೇನಿಹುದು ಶರಣನ ।
ಪತಿಕರಿಸೆದೆವು ಎಂದು ನುಡಿಯುತೆ ।
ಅತುಳ ಮಹಿಮೆಯ ತೋರಿ ಮೆರೆದಾ ಗುರುವೆ ನಮಿಸುವೆನು ॥ ೪೨ ॥

ಇವನದೆಂತು ಪುನೀತ ನೆಂಬಾ ।
ವಿವರ ತೋರ್ಪೆವು ನೋಡಿರೆನ್ನುತ ।
ಜವದಿ ಬಿಳಿಬಟ್ಟೆಯನು ಕೇರೆಣ್ಣೆಯಲಿ ಬಳಿಯುತ್ತೆ ॥
ಅವರ ಇದಿರೊಳ್ ಶಂಖದುದಕದ ।
ಲವವಚೆಲ್ಲಿ ಕಳಂಕ ವಸ್ತ್ರವ ।
ಧವಳ ಮಾಡುತೆ ವರಮಹಾತ್ಮ್ಯೆಯತೋರ್ದ ಗುರು ಪೊರೆಯೈ ॥ ೪ ॥

ಮುಸಲಮಾನನು ನಿಮ್ಮ ದರುಶನ ।
ದೊಸಗೆಗಾಗಿಯೆ ಮಾಂಸಪಾತ್ರೆಯ ।
ಮುಸುಕಿನಲಿ ತಂದಿತ್ತು ನೈವೇದ್ಯವನು ಮಾಡೆನಲು ॥
ನಸುನಗುತ ನಿಜಹಸ್ತ ಜಲದಿಂ ।
ದೆಸಗಿ ಯದನಂ ತೆರೆದು ನೋಡಲು ।
ಕುಸುಮ ಫಲಗಳು ಕಂಡುಬಂದುವದೇಂ ತಪೋಬಲವೊ ॥ ೪೪ ॥

ತಂದಡಗು ಫಲಪುಷ್ಪವಾಗಲು ।
ಮಂದಮತಿ ತಾನೆಂದು ಭೂಪನು ।
ನೊಂದು ನಾನಪರಾಧ ಮಾಡಿದೆ ಯತಿಮಹಾದೇವ !
ಮಂದಭಾಗ್ಯನ ನುದ್ಧರಿಸ ಬೇ ।
ಕೆಂದು ಬೇಡ್ವುದ ನೀವೆ ನೆಂದನು ।
ಸಂದೆಯುವ ತಾ ತೊರೆದು ಯತಿ ಶ್ರೇಷ್ಠ ನಲಿನಲವಿಂದ ॥ ೪೫ ॥

ಇನ್ನು ಮರುಗಲದೇಕೆ ಭೂಪನೆ !
ಮನ್ನಿಸುವ ನಪರಾಧವನು ಹರಿ ।
ಯನ್ನ ತಪವನು ಸಾಧಿಸಲು ವರಮಂತ್ರಭವನೆಂಬ ॥
ಚನ್ನ ವರಹಜೆ ದಡದಲಿರ್ಪಾ ।
ಸನ್ನು ತಾಮುಳ ಗ್ರಾಮವನು ಸಂ ।
ಪನ್ನಕೊಡು ನೀ ನೆನಲು ಕೊಟ್ಟನು ಗುರುವಿ ಗಾಕ್ಷಣವೆ ॥ ೪೬ ॥

ಪೇಳುವೆನು ಗುರುವರನ ಪೂರ್ವದ । ಪ್ರಹ್ಲಾದ ಚರಿತ್ರೆ
ಮೂಲಜನ್ಮಾಖ್ಯಾನ ಮಹಿಮೆಯ ।
ಬಾಲಬುದ್ಧಿಗೆ ನಿಲುಕಿದಂತೆ ಯಥಾನುಶಕ್ತಿಯಲಿ ॥
ಆಲಿಸುತ ಹರ್ಷಿಸುತ ಗುರುಗಳು ।
ಪಾಲಿಸಲಿ ಭಕ್ತರನು ನಿರತವು ।
ಮೇಲೆ ನರಹರಿ ಕರುಣ ವಾಗಲಿ ಕೇಳ್ವಸುಜನರಿಗೆ ॥ ೪೭ ॥

ಪೂರ್ವದೇವರ ವಂಶಜಾತನ ।
ಖರ್ವವಿಕ್ರಮ ನಮಿತಹಿಂಸಕ ।
ನುರ್ವಿಯೊಳು ಕಡು ಕೂಳನಾ ದಾ **ಕನಕಕಶಿಪುವು** ತಾ ॥
ಸರ್ವಲೋಕವ ಜಯಿಸಿ ಎಲ್ಲ ಸು ।
ಪರ್ವರನು ಸೆರೆಯಿಕ್ಕಿ ಬಾಧಿಸೆ ।
ಗರ್ವಿತನೊಳುದಸಿದನು ಗುರುಪ್ರಹ್ಲಾದ ನಾಮದಲಿ ॥ ೪೮ ॥

ಶಂಡಮರ್ಕರು ದನುಜ ಪುತ್ರಗೆ ।
ಕಂಡುಬರುವೀ ಪೃಥ್ವಿಹುಸಿಗಡ ।
ಗಂಡುಗಲಿ ನಿಮ್ಮಯ್ಯನೇ ಸರ್ವತ್ರಪೂಜ್ಯನೆನೆ ॥
ಕಂಡು ವರ ಪ್ರಹ್ಲಾದ ನವರ ವಿ ।
ತಂಡ ವಾದವ ತರಿದು ಶ್ರೀಹರಿ ॥
ಗಂಡುಗಲಿಗಳ ಗಂಡ **ಸರ್ವೋತ್ತಮನು** ನಿಜವೆಂದು ॥ ೪೯ ॥

ಉಳಿದ ಬ್ರಹ್ಮ ಭವಾದ್ಯ ರೆಲ್ಲರು ।
ನಳಿನ ನಾಭನ ದಾಸ ರೆನಿಪರು ।
ಜಲಜವಾಸಿನಿ ಸೇವೆ ಗೈಯುಲು ರಮಣಿಯಾಗಿಹಳು ॥
ಬಳಸಬೇಡಿರಿ ದೈತ್ಯ ಕುಮತವ ।
ತಿಳಿಸಿರ್ಸೈ ಸದ್ವೈತ ತತ್ತ್ವವ ।
ಗಳಿಸಿರ್ಸೈ ಕೀರ್ತಿಯನು ಗುರುಪುತ್ರರಿರ ನೀವೆಂದು ॥ ೫೦ ॥

ಬೋಧಿಸಿದ ಸದ್ವೈತಮತವನು ।
ಸಾಧಿಸಿದರಾ ದೈತ್ಯಪುತ್ರರು ।
ಖೇದಗೊಂಡರು ಶಂಡಮರ್ಕರು ನಡೆದ ಸಂಗತಿಗೆ ॥
ವೇದಿಸಿದ ರೆಲ್ಲರನು ದಂಡದಿ ।
ಆದರೇನಾಯ್ತ್ತದನು ಗಣಿಸದೆ ।
ಸಾದರದಿ ಮಾಧವನ ನೆನೆದರು ದನುಜ ಬಾಲಕರು ॥ ೫೧ ॥

ಅಸುರಬಾಲರು ಗುರುಗಳೊರೆದುದ |
ನಸುರದಿದರ್ೋಕ್ಕಟ್ಟಿನಲಿತಃಂ |
ಕೊಸರಿ ವೇಳ್ದರು ನೀವದಮ್ಮಗೆ ಪೇಳ್ವಮತಶಾಸ್ತ್ರ ||
ಅಸಿತ ವಿಷದಂತಿಹುದು ಪರಿಕಿಸೆ |
ಸ್ವಸುಖ ವಾಗುವು ದುಂಟೆಯದರಿಂ |
ಕಸಿಬಿಸಿಯ ಮಾಡದಿರಿ ಸುಮ್ಮನೆ ಎಂದರರ್ಭಕರು || ೫೨ ||

ಒಡನೆ ಬಾಲರು ನುಡಿದ ಮಾತಿಗೆ |
ಜಡಿದುನಿಲ್ಲಿಸಿ ಶಂಡಮರ್ಕರು |
ಫಡೆಫಡೆನ್ನುವ ತೆರದೊ ಳವರಿಗೆ ಪೆಟ್ಟನಿಕ್ಕಿದರು ||
ಕಿಡಿಗ ಳುಗುಳುತ ಕಿವಿಯ ಪಿಂಡುತ ||
ನುಡಿಯದಿರಿ ಹರಿನಾಮ ವೆನ್ನಲು |
ಬಿಡುಕದಾ ಬಾಲಕರು ಮಾಧವ ನೆಂದು ಕೂಗಿದರು || ೫೩ ||

ಗುರುಗಳೇ ಶಿವನೆಮ್ಮಗುರುಕುಲ |
ಸರಣಿಯಲಿ ತಾನಿರುವನಾದೊಡೆ |
ಹರನು ಸರ್ವೋತ್ತಮನು ಎಂಬುದು ಭ್ರಾಂತಿಜಾತವದು ||
ಹಿರಿಯರಲ್ಲವು ನೀವುವೇದದೊ |
ಳೊರೆದುದಂ ನಿಜವಾಗಿ ಪೇಳದೆ |
ನರಕ ಭಾಜನ ವಪ್ಪಸೋಽಹಂ ನುಡಿಯ ಪೇಳುವಿರಿ || ೫೪ ||

ಮಕ್ಕಳೆಂದುದ ಕೇಳಿ ಶಂಡಾ |
ಮರ್ಕರೀ ಪ್ರಹ್ಲಾದ ಬಾಲಕ |
ನಿಕ್ಕಿದೀಸಂಕಟದಿ ನಾವಿನ್ನೆಂತು ಪಾರಹುದು ||
ಉಕ್ಕಿನಲಿ ಸುರವೈರಿ ಎಮ್ಮೆಳು |
ಫಕ್ಕನೇ ರೇಗಿದರೆ ಉಳಿವೆವೆ |
ರಕ್ಕಸಂಗಿದು ಮೊದಲೆ ತಿಳಿಪುವು ದುಚಿತವಹುದುಗಡ || ೫೫ ||

ಎಂದು ಯೋಚಿಸಿ ವಿಪ್ರರಾಕ್ಷಣ ।
ಬಂದು ದೊರೆಯಂ ಕಂಡು ನಿನ್ನಯ ।
ಕಂದ ತಾಂ ಕುಲವೈರಿ ಹರಿ ಸರ್ವೋತ್ತಮನು ಎಂಬ ॥
ಮಂದಭಾಗ್ಯನು ದೈತ್ಯಶಿಶುಗಳ ।
ವೃಂದಕೆಲ್ಲಾ ಅದನೆ ಪೇಳ್ದಿಹ ।
ಕೊಂದರೂ ಆನುಡಿಯ ನುಡಿವುದು ಬಿಡರು ಬಾಲಕರು ॥ ೫೬ ॥

ಒಪ್ಪಿಸಿದೆವೈ ಮಗನ ನಿನಗೆ ।
ತಪ್ಪು ನಮ್ಮೊಳಗಿಲ್ಲ ಪ್ರಭುವರ !
ಕಪ್ಪು ವೈಯವ ನಿವಗೆ ಬಡಿಕೊಂಡಿಹನು ಬಿಡಿಸುವೊಡೆ ॥
ಮುಪ್ಪುರಾರಿಯ ಕೈಯಲಾಗದು ।
ಬಪ್ಪೆವೈ ನಾ ವೆನುತ ವಿಪ್ರರು ।
ಸಪ್ಪಳಿಲ್ಲದೆ ತೆರಳಿದರು ನಿಜಗೃಹಕೆ ನಡುಗುತ್ತ ॥ ೫೭ ॥

ಕಾಲಭೈರವ ನಂತೆ ಕೆರಳುತ ।
ಪೇಳಿದನು ಬಾಲಕಗೆ ದೈತ್ಯ ಕ ।
ರಾಳರೂಪನು ಎಲೆಲೆ ಎನ್ನಯ ವೈರಿ ನಾಮವನು ॥
ಪೇಳುವಾ ಜಿಹ್ವೆಯನು ಶೀಘ್ರದಿ ।
ಸೀಳಿ ಬಿಸುಟವೆ ನಿನ್ನ ಪಾಡೇಂ ।
ಬಾಳು ನೀ ನೆಲೆ ಮತ್ಪ್ರತಾಪವ ಹೊಗಳು ಎಂದಾಗಳ್ ॥ ೫೮ ॥

ಹರನ ಭಜಿಸೆಂ ದಾರ್ಯವರ್ಯರು ।
ಒರೆದ ರೊಮ್ಮೆನ ಗವರು ಮೊದಲೊಳ್ ।
ಇರಲಿ ನೀಂ ಹರಿಹರರ ನುಳಿದೀ ತೆರದಿ ನಿನ್ನನ್ನೆ ॥
ಸ್ಮರಿಸು ಎಂಬಾಶಾಸನದ ನುಡಿ ।
ದುರಿತಮಯ ವದು ದ್ವೈತತತ್ತ್ವವ ।
ನರಿವುದೆಲೆ ಹರಿದೈವ ಹರ ಗುರುವೆಂದ ನಾ ಬಾಲ ॥ ೫೯ ॥

ಗುರುಪರಂಪರೆ ಯೊಳಗೆ ರುದ್ರನು ।
ವೆರೆದು ಮುಕ್ತಿಗೆ ಮತಿಯ ನೀವನು ।
ಧರೆಯ ದಾಡೆಯ ಲೆತ್ತಿದಾತನೆ ಮುಕ್ತಿದಾತಗಡ ॥
ಅರಿತು ನೀ ನಿದ ಸಾಧನದ ಹೆ ।
ಗ್ಗುರಿಯ ನನುಸರಿಸುವುದು ಧರ್ಮವು ।
ಅರಸ ಕೇಳೆಂ ದದನು ತಾಂ ಪೇಳಿದನು ಪ್ರಹ್ಲಾದ ॥ ೬೦ ॥

ವರಸುರಭಿ ತಾ ನಿರಲು ನೀಚರು ।
ಬರಡು ಮಹಿಷವ ನಾಳ್ವ ತೆರದಲಿ ।
ಪರಮದೈವವ ತೊರೆದು ಚಿಲ್ಲರೆ ದೇವರನೆ ನಂಬಿ ॥
ಕುರುಡ ರಂದದಿ ತಿರುಗುತಿಹರಿವ ।
ರರಿಯ ರಾತ್ಮಾನಂದ ಬೋಧೆಯ ।
ನರಕ ಕಿಳಿಸುವ ವ್ಯರ್ಥನಿರ್ಗುಣಸಿದ್ಧಿಯನೆ ಬಯಸಿ ॥ ೬೧ ॥

ದ್ವೇಷಿಹರಿ ತಾನೆಂದು ಪೇಳ್ದೊಡೆ ।
ದೋಷಗುಣವೇನಿಲ್ಲ ವವನಲಿ ।
ಪೋಷಕನು ಸರ್ವಾಂತರಾತ್ಮನು ಮತ್ತೆ ಗುಣಪೂರ್ಣ ॥
ಶೇಷತಲ್ಪನ ಮಹಿಮೆ ತಿಳಿಯದೆ ।
ಭಾಷ್ಯದೊಳಗನುಚಿತವ ಬಗೆಯುತ ।
ಕ್ಲೇಶ ಮಾಯಾಪಾಶದಲಿ ಬಿಗಿವಡೆದು ಬಳಲುವರು ॥ ೬೨ ॥

ಎಂದು ನುಡಿಯುತ್ತಿದ್ದ ಬಾಲನ ।
ನಂದು ಗರ್ಜಿಸಿ ದೈತ್ಯಪತಿ ಮುಳಿ ।
ಸಿಂಬಲೊಡನೆಯು ಕ್ರೂರಭೃತ್ಯರ ಕೂಗಿ ಕರೆಸುತ್ತ ॥
ಕೊಂದುಬಿಡಿ ರಿವನನ್ನು ಪರಿಪರಿ ।
ಯಿಂದ ಹಿಂಸಿಸಿ ಬಾಧೆ ಪಡೆಯಿಸಿ ।
ಎಂದು ಕಟ್ಟಾಣತಿಯ ಗೈಯುತ ಕಳುಹಿದನುಚರರ ॥ ೬೩ ॥

ಕೆಟ್ಟಕಟುಕರು ಭೂಪನಾಜ್ಞೆಯೊ ।
ಳಿಟ್ಟರವನಂ ಶೂಲದಿಂದಲಿ ।
ಕಟ್ಟನೇಣಿಂತೂಗಹೊಯ್ದರು ಬಿಸುಡಿದ ನೆಲಕೆ ॥
ನಟ್ಟನಸಿಕೊನೆಯಿಂದ ತಿವಿಯುತ ।
ಬೆಟ್ಟವೇರಿಸಿ ಕೆಳಗೆ ನೂಂಕುತ ।
ಮೆಟ್ಟಿಸಿದರತಿಮದದಿ ಮೆರೆಯುವ ದಂತಿವರ್ಗದಲಿ ॥ ೬೪ ॥

ಉದಧಿಯಲಿ ಬೀಸಾಡಿಬಂದರು ।
ಕುದಿವ ಎಣ್ಣೆಯ ಲದ್ದಿ ತೆಗೆದರು ।
ಉದಿತ ಪ್ರಜ್ವಲದಗ್ನಿಯಲಿ ನೆರೆನೂಂಕಿ ಕೆಡಹಿದರು ॥
ವಿಧವಿಧದ ಬಹುಪರಿಯ ಯಾತನೆ ।
ಮದಯುತರ ಮಿಗೆಮಾಡೆ ಬಾಲಕ ।
ನೆದೆವೊಡೆದು ಹಾ ಜನನಿ ಎನ್ನದೆ ಹರಿಯ ಸ್ಮರಿಸಿದನು ॥ ೬೫ ॥

ಲಕ್ಷ್ಯಮಾಡದೆ ಯಾತನೆಂಗಳ ।
ಶಿಕ್ಷಿಸದೆ ಕ್ರೂರರನು ಕುವರನು ।
ಪಕ್ಷಿವಾಹನ ಮೀನ ಕೂರ್ಮ ವರಾಹ ರೂಪಗಳಿಂ ॥
ರಕ್ಷಿಸಿದೆ ಲೋಕಗಳನೆಲ್ಲನು ।
ಅಕ್ಷಯಾತ್ಮನೆ ನಿತ್ಯವೈಷ್ಣವ ।
ಪಕ್ಷಪಾತಿಯೆ ದೈತ್ಯಮದಗಜ ಹರಿಯೆ ಹರಿಯೆಂಬ ॥ ೬೬

ಇನಿತು ಸ್ತೋತ್ರವಗೈಯುತಲಿ ಯಾ ।
ದನುಜತನುಜನು ಅಣುವಿ ನೊಳಗುಂ ।
ವನಜಸಂಭವನಯ್ಯ ನಾ ರೂಪಗಳ ನೆರೆನೋಡಿ ॥
ಮನದಿ ವಿಸ್ಮಯ ಗೊಂಡು ಹರುಷದಿ ।
ತನುವ ನಲುಗಿಸಿ ನಿಜಕರಂಗಳ ।
ನನಿಲ ಸೇವಿತ ಪಾದಪದ್ಮಕೆ ಮುಗಿವ ನನವರತ ॥ ೬೭ ॥

ಹಿಂಸಕರು ಸಲೆನೋಡಿ ಮನದಿ ಪ್ರ ।
ಶಂಸೆಯನೆ ತಾಂ ಮಾಡಿ ಹೃದಯದಿ ।
ಸಂಶಯವು ಉದಿಸಲ್ಕೆ ನಡುಗುತ ಲವನ ಕರೆದೊಯ್ದು ॥
ವಂಶವರ್ಧಕ ತನುಜನನು ಸುರ ।
ಹಿಂಸಕನ ಮುಂದಿರಿಸಿ ಪೇಳ್ವರು ।
ಹಂಸನೋಪಾದಿಯಲಿ ಚರಿಸುವನೆಂದು ಬೇಸರದೆ ॥ ೬೮ ॥

ಪದಕೆ ಎರಗಿದೆವಯ್ಯ ದೇವನೆ ।
ಇದಕೆ ನಿನ್ನಯಸೂನು ಜೀಯನೆ ।
ಎದೆವೊಡೆದು ತ್ರಾಣಂಗ ಳಿಲ್ಲದೆ ಬಾಡಿ ಬೆಂದಿಹೆವು ॥
ಹೃದಯ ತತ್ತರಿಸುವುದು ತಡೆಯದೆ ।
ಸದಯಕೊಡು ಅಪ್ಪಣೆಯ ನೆಮ್ಮಗೆ ।
ಸದನಸೇರುವೆವೆಂದು ನುಡಿಯುತೆ ತೆರಳಿದರು ತ್ವರದಿ ॥ ೬೯ ॥

ಹರಿಯ ಬಿಂಬವ ಬಿಡದೆ ನೋಡುವ ।
ತಿರುತಿರುಗಿ ಕಣ್ಮುಚ್ಚಿ ತೆರೆಯುವ ।
ಅರಿವು ಮೈಮೇಲಿಲ್ಲ ಎಲ್ಲಿಹೆ ನೆಂಬ ಸ್ಮೃತಿಯಿಲ್ಲ ॥
ಸರಿವ ತೂಗುವ ನೆರಡು ಕೈಯ್ಗಳ ।
ಭರದಿಜೋಡಿಸಿ ನಕ್ಕು ನಮಿಸುವ ।
ನರರೆ ! ಶಿಶುವನು ನೋಡಿ ದಾನವನೃಪತಿ ಗರ್ಜಿಸಿದ ॥ ೭೦ ॥

ಎಲವೊ ಸೂಕರವೇಷ ಹಾಕಿದ ।
ಕುಲಕೆಡುಕನಂ ನೆನೆದು ಹಲುಬುವೆ ।
ಜಲಧಿ ಮಧ್ಯದಿ ವಾಸಮಾಡುತೆ ಕಳ್ಳನಂದದಲಿ ॥
ತಲೆಯ ರಕ್ಷಿಸಿ ಕೊಂಬ ಹೇಡಿಯ ।
ಬಲು ಬಲಾನ್ವಿತ ನೆಂದು ಹೊಗಳುವ ।
ಹಲವು ಬಗೆಗಳ ಲವನ ತುತಿಸುವೆ ಭಟ್ಟ ನಂದದಲಿ ॥ ೭೧ ॥

ಈಗ ನಿನ್ನಂ ವಧಿಸುವೆನು ನೀಂ ।
ಕೂಗು ನೆರವಾಗೆಂದು ಹರಿಯನು ।
ಬೀಗಿ ಬಂದೊಡೆ ತಾಗಿ ಕೆಡಹುವೆ ನವನ ಮಾರ್ಮಲೆತು ॥
ಆಗ ಲಿದನಂ ನೋಡಿ ಬಿಡುವೆನು ।
ರೋಗದಂದದೊ ಳಿನ್ನ ವಂಶದಿ ।
ಕಾಗೆ ಜನಿಸಿದೆ ನೀನು ತೋರೆಲ್ಲಿಹನು ಹರಿಯೆಂದ ॥ ೭೨ ॥

ಎಲ್ಲಿಹನು ಹರಿಯೆಂದು ಕೇಳ್ವಿಯ ।
ಎಲ್ಲಿ ನೋಡಿದ ರಲ್ಲಿ ಇರುವನು ।
ಇಲ್ಲದಾ ಸ್ಥಳವಿಲ್ಲ ಹರಿ ಸರ್ವತ್ರ ವ್ಯಾಪಕನು ॥
ಬಲ್ಲಿದನು ಭಕ್ತೈಕ ಪಾಲನು ।
ಕ್ಷುಲ್ಲ ಜೀವರ ಹಲ್ಲು ಮುರಿವನು ।
ಸಲ್ಲದೈ ಶ್ರೀಹರಿಯ ಮೇಲಣ ಹಗೆಯು ಎನೆಮಗುವು ॥ ೭೩ ॥

ಮೂರು ಲೋಕಗ ಳಿನ್ನ ದರ್ಪಕೆ ।
ಕಾರಿಕೊಂಬುವು ರಕುತವನು ಹರಿ ।
ಶೂರನೆಂದೇ ಲಕ್ಷ್ಯ ಮಾಡದೆ ಮಾತ ನಾಡುವೆಯಾ ॥
ತೋರು ಈ ಕಂಬದಲಿ ನಿನ್ನ ವಿ ।
ಕಾರಿದೇವನ ನಿಲ್ಲ ದಿರ್ದೊಡೆ ।
ಕೂರಸಿಗೆ ಬಲಿನಿನ್ನ ಗೈಯುವೆ ನೆಂದ ನಾ ದನುಜ ॥ ೭೪

ತಲ್ಲಣಿಸಿತಾಸ್ಥಾನ ಪರಿಜನ ।
ವೆಲ್ಲ ವೋಡಿತು ಕಂಡದಿಕ್ಕಿಗೆ ।
ಕೊಲ್ಲುವನು ಗತಿಯೇನು ಯಂದಳಲಿದಳು ದನುಜಪತಿ ॥
ಬಲ್ಲಿದನು ಪ್ರಹ್ಲಾದ ಬಾಲನು ।
ಸಲ್ಲಲಿತಭಕ್ತಿಯಲಿ ಕರೆದನು ।
ಯಲ್ಲಿನೋಡಿದರಲ್ಲಿಯಿರುವಾ ವಾಸುದೇವನನು ॥ ೭೫

'ಬಾ' ಯೆನುತ ನುಡಿದಾಕ್ಷಣವೆ **ಹರಿ** ।
'ಓ' ಯೆನುತ ಕಂಬವನು ಒಡೆಯುತ ।
ಕಾಯ ಬಂದನು ಭಕ್ತ **ನರಸಿಂಹರೂಪದಲಿ** ॥
ಬಾಯ ಬಿಟ್ಟಿತು ಮೂರು ಲೋಕವು ।
'ಹೂ'ಯೆನುತ ಮಾರ್ಮಲೆತ ರಕ್ಕಸ ।
ರಾಯನನು ನೋಡುತ್ತ ಹರಿ ತಾಂ ಪಿಡಿದ ನಖಭರದಿ ॥ ೭೬ ॥

ಎಳೆದು ಹೊಸ್ತಿಲಿ ನಡೆಗೆ ಕಾಯುವ ।
ಸೆಳೆದು ತೊಡೆಮೇಲಿರಿಸಿ ಕೋಪದಿ ।
ಅಲಘುಭುಜಬಲಖಲನ ಪೊಡೆಯನು ಸೀಳಿದನು ನಖದಿ ॥
ಪ್ರಳಯಕಾಲದ ಭೈರವನನುರೆ ।
ಹಳಿವ ರೂಪವ ನಾಂತು ದರ್ಪದೆ ।
ಭಳಿರೆ ! ಕರುಳಿನ ಮಾಲೆ ತಾಳ್ದನು ವಿಮಲ ವನಮಾಲಿ ॥ ೭೭ ॥

ಲಕುಮಿ ವಿಧಿ ಪವಮಾನ ಶಂಕರ ।
ಸಕಲಸುರ ರತಿ ಭಯದಿ ಹರಿಯಂ ।
ಭಕುತಿಯಿಂ ಸ್ತುತಿಮಾಡಿದರು ಪ್ರಹ್ಲಾದ ಸಿಂತೆಂದ ॥
ಸುಕರ ವಾಯಿತು ಕ್ರೂರ ನಳಿದನು ।
ಸಕಲ ಲೋಕಂಗಳನು ರಕ್ಷಿಸೆ ।
ವೆಕುತ ವಾಗಲಿ ಶಾಂತರೂಪವು ದೀನಜನಬಂಧೂ ! ॥ ೭೮ ॥

ಪುಟ್ಟನಾಡಿದ ಮಾತು ಮಿಗದೆ ।
ಜಟ್ಟಿಸಿರಿ ನರಸಿಂಗ ಮೂರುತಿ ।
ಕಟ್ಟಿದನು **ಪ್ರಹ್ಲಾದರಾಯಗೆ** ರಾಜ್ಯಪಟ್ಟವನು ॥
ಕೊಟ್ಟ ನಭಯವ ಭಕ್ತನಿಗೆ ಮಿಗೆ ।
ಕಟ್ಟಳೆಯ ಮಾಡಿದನು ಪ್ರೇಮದಿ ।
ದಿಟ್ಟ ನೀಂ ನಾಲ್ವತ್ತು ಸಾಸಿರ ವರುಷ ಸುಖಿಸೆಂದು ॥ ೭೯ ॥

ಕುಂದು ಕೊರತೆಗಳಿಲ್ಲ ದಂದದಿ ।
ಕಂದ ಸಾಮ್ರಾಜ್ಯವನು ಸಲಹಲು ।
ಬಂದಪುಣ್ಯವು ಪೆರ್ಚಿ ಮಿತಿಮೀರುವುದು ಸಾಧನಕೆ ॥
ಅಂದು ನೀ ಮತ್ತೊಂದು ಜನುಮದಿ ।
ನಿಂದು ಯತ್ಯಾಶ್ರಮದಿ ಸೇವಕ ।
ಬೃಂದ ದಿಷ್ಟಾರ್ಥಗಳ ನೀವುದು ಜಗವು ಬೆರಗಾಗೆ ॥ ೮೦ ॥

ಅಂಧಿ ಗೆನ್ನನು ಭಕ್ತಿ ಪೂರ್ವಕ ।
ವಂದ ನಾರ್ಚನೆ ಯಿಂದ ಮೆಚ್ಚಿಸಿ ।
ಮುಂದೆ ಯಾ ಪುಣ್ಯದಲಿ ಮತ್ತಿನ್ನೊಂದು ಜನ್ಮವದು ॥
ಸಂಧಿಸಲು ಕರ್ನಾಟ ದೇಶದಿ ।
ನಿಂದು ನೀಂ ಯತಿರಾಜ ನಾಗುತೆ ।
ವಂದಿ ಬಂದೋಲೈಸೆ ವರಗಳ ನೀಡು ನೀ ನೆಂದ ॥ ೮೧ ॥

ಕೇಶವನ ಶಾಸನದಿ ರಾಜ್ಯವ ।
ಬೇಸ ರಿಲ್ಲದೆ ಸಲಹಿ ಗೈದನ ।
ಶೇಷಯಜ್ಞ ಸುನಿಕರವನು ಪ್ರಹ್ಲಾದ ಗುರುವರನು ॥
ಆಸುದೇಶ ಸ್ಥಳವೆ ಈಗಿನ ।
ಭಾಸಮನ್ವತ ಮಂತ್ರಭವನವು ।
ವಾಸಿಸಲು ಗುರುರಾಯ ಕೇಳ್ವುದ ಕದುವೆ ಕಾರಣವು ॥ ೮೨ ॥

ರಾಘವೇಂದ್ರರೆಮುನ್ನ ಜನುಮದೊ ।
ಳಾಗಿ ತಾ ಬ್ರಹ್ಮಣ್ಯತೀರ್ಥಸು ।
ಯೋಗಿ ಕರಪದ್ಮಜರು ಕನ್ನಡನಾಡಿನೊಳ ಗುದಿಸಿ ॥
ತ್ಯಾಗಶೀಲ ಪುರಂದರಾದಿ ಸು ।
ಭಾಗವತರುಂ ಭೂಪರುಂ ಶಿರ ।
ಬಾಗಿ ಸೇವಿಸೆ ದಾಸಕೂಟದಿ ತೋರಿದರು ಮಹಿಮೆ ॥ ೮೩ ॥

ವಾದಿರಾಜರು ಶಿಷ್ಯರಾಗುತೆ ।
ಓದಿಕೊಂಡರು ವಿಜಯನಗರದಿ।
ವಾದಿಗಳನುರೆಗೆದ್ದು ಜಯಭೇರಿಯನೆ ಹೊಡೆಸಿದರೂ ॥
ತೋದ ಕೋಳಿಗ ಳಂತೆ ಮುದುರುತೆ ।
ಖೇದ ಗೊಂಡರು ಮಾಯಿಗಳು ವರ ।
ವೇದ ಗ್ರಂಥಗಳೊರೆದು ಪೊರೆದರು ಪೂರ್ಧ್ವ ಮಂಡಲಿಯ ॥ ೮೪ ॥

ಅರ್ಥಿಜನ ಸುರಭೂಜನುಂ ಪ್ರ ।
ತ್ಯರ್ಥಿಗಜಕೇಸರಿಯು ಮಾದಾ ।
ತೀರ್ಥಪಾದನೆ ದ್ವೈತವಿದ್ಯಾಪೀಠ ಕುಲಪತಿಯೆ ॥
ಪಾರ್ಥಸಾರಥಿಯನ್ನು ಪೂಜಿಪೆ ।
ಕೀರ್ತಿಮಂತನೆ ವ್ಯಾಸರಾಯನೆ ।
ಆರ್ತ ರಾದೆಲ್ಲರನು ವೀಕ್ಷಿಸಿ ಪೊರೆವ ದನುದಿನವು ॥ ೮೫ ॥

ಕಂಚಿಯೊಳಗೀ ವ್ಯಾಸರಾಯಗೆ ।
ಹೊಂಚು ಹಾಕುತೆ ಕುಜನ ರೆಲ್ಲರು ।
ಕೊಂಚ ವಾದರು ಯೋಚಿಸದೆ ಮಾತ್ಸರ್ಯ ಬುದ್ಧಿಯಲಿ ॥
ವಂಚನೆಯ ಮಾಡುತ್ತ ಗೋಪ್ಯದಿ ।
ಹಂಚಿದರು ಗರಳವನು ಪಾಪಕೆ ।
ಸಂಚಕಾರವ ನೀವ ದುರ್ವರ್ತಕರ ರೀತಿಯಲಿ ॥ ೮೬ ॥

ಪಕ್ಷಿವರವಾಹನನೆ ದೈವವು ।
ದಕ್ಷಪವನನೆ ಪರಮಗುರು ಸಂ ।
ರಕ್ಷಣೆಗೆ ಭಯವೇನು ಪ್ರಹ್ಲಾದಾಂಶ ಜಾತನಿಗೆ ॥
ಭಕ್ಷಣೆಯ ಮಾಡಿದೊಡೆ ವಿಷವದು ।
ಕುಕ್ಷಿಯೊಳಗೇ ಜೀರ್ಣ ವಾದುದು ।
ಋಕ್ಷಪತಿ ಯಂದದಲಿ ಕಂಗೊಳಿಸಿದನು ದುಷ್ಟರಿಗೆ ॥ ೮೭ ॥

ಗರಳ ವಿಕ್ಕಿದ ಧೂರ್ತ ಜನರಲಿ ।
ಸರಳ ಶಾಂತತ್ವವವನು ಬೀರುತೆ ।
ಪರಮಹಂಸನು ತಿಳಿಹಿದನು ಸಾತ್ವಿಕದ ಮರ್ಮವನು ॥
ಶಿರವಬಾಗುತವಂದಿಸುವೆತವ ।
ಚರಣ ಯುಗ್ಮಕೆ ವ್ಯಾಸರಾಯನೆ ।
ಪರಮ ವೈಷ್ಣವಮಣಿಯೆ ವೈರಾಗ್ಯಾತ್ಮ ಗುಣಖನಿಯೆ ॥ ೮೮ ॥

ಉರಗದಂಷ್ಟ್ರದಿ ಮಡಿದ ಧರಣೀ ।
ಸುರನ ಸುತನಿಗೆ ಜೀವವಿತ್ತಾ ।
ದರದೊಳವ ರನ್ವಯವ ನುಳಿಸಿದೆ ಗುರುಕುಲೋತ್ತುಂಗ ॥
ಶರಣಜನ ಪಾಲಕನೆ ಶ್ರೀಮ ।
ತ್ಪರಮಯತಿಕುಲ ದೀಪಕನೆ ನೀಂ ।
ಕರುಣಿಪುದು ನಿಮ್ಮನ್ನು ಭಜಿಸುವ ಮನವ ನೆನಗಿತ್ತು ॥ ೮೯ ॥

ವೇಂಕಟೇಶಾರ್ಚಕರು ಲೌಕಿಕ ।
ಬಿಂಕದಲಿ ಶ್ರೀಪತಿಯ ಪೂಜೆ ಕ
ಳಂಕಿತವು ಮಾಡಿದೊಡೆ ವರಕರ್ಣಾಟ ಭೂಪಾಲ ॥
ಸಂಕಟವ ಪಡುತಿರಲು ಯತಿಪತಿ ।
ಭೋಂಕನೇ ತಾಪವನು ಕಳೆದಾ ।
ತಂಕವಿಲ್ಲದೆ ದ್ವಾದಶಾಬ್ದಾರ್ಚನೆಯ ನೀಂ ಗೆಯ್ದೈ ॥ ೯೦ ॥

ಮಂದವಾರದಿ ವೇಂಕಟೇಶನ ।
ನಂದುಪೂಜಿಸಿ ನಡೆವ ಸಮಯದಿ ।
ಪೊಂದಿಸದೆಪಾದಗಳ ಬೆಟ್ಟದೊಳಂಬೆಗಾಲಿಡುತ ॥
ಒಂದೆ ಭಕುತಿಯ ಲೇರುತಿಳಿಯುತ ।
ಚಂದ ದಿಂದಲಿ ಪೂಜೆ ಗೈದಾ ।
ಹಿಂದಿ ನರ್ಚಕಪುತ್ರನಿಗೆ ನೀಂ ಸೇವೆ ಕೊಡಿಯಿಸಿದೈ ॥ ೯೧ ॥

ಧರೆಗೆ ಪುಣ್ಯಸ್ಥಳವದೆನಿಸುವ ।
ಹಿರಿಮೆಪಡೆದಾ **ಹಂಪೆಯಲಿ** ಗುರು ।
ವರರು **ಯಂತ್ರೋದ್ಧಾರಮಾರುತಿಯನ್ನು** ನೆಲೆಗೊಳಿಸಿ ॥
ಮರಳಿಕರ್ಣಾಟಕದಮಹಿಯಲಿ ।
ಪರಮಗುರು **ಪವಮಾನರನು** ನೀಂ ।
ಗಿರಿ ಸರಿ ತ್ರ್ಕಟ ದೆಡೆಗಳೊಳ್ ಸ್ಥಾಪಿಸಿದೆ ವೈಭವದಿ ॥ ೧೨

ರಾಮ ದೂತನ ಭೀಮಸೇನನ ।
ಕ್ಷೇಮದಾತನ **ಮಧ್ವರಾಯನ** ।
ರಾಮಣೀಯಕವಾದಮೂರ್ತಿತ್ರಯವ ಸ್ಥಾಪಿಸಿದಾ ॥
ಸ್ವಾಮಿ ನಿಮ್ಮನು ಸ್ಮರಣೆ ಮಾಡುವೆ ।
ಭಾಮಿನೀಷಟ್ಪದಿಯ ನುಡಿಯುತೆ ।
ನೇಮ ನಿಷ್ಠೆಗ ಳೇಕೆ ಹರಿಕಿಂಕರರ ನೆನೆವವಗೆ ? ॥ ೧೩ ॥

ಅಂದದಾ **ಚಂದ್ರಿಕೆಯ** ನಾತ್ಮಾ ।
**ನಂದತರ್ಕಗ್ರಂಥವನು** ಬಲು ।
ಪಿಂದೆಬರೆಯುತೆ ವಿಮಲ **ಭೇದೋಜ್ಜೀವನವ** ನೊರೆದು ॥
ಮಂದಮತಿಗಳಿ ಗೆಲ್ಲ ಬುದ್ಧಿಯ ।
ತಂದುಕೊಡುತಿಹ ನ್ಯಾಯವನು ಗೋ ।
ವಿಂದಕೀರ್ತನೆಗಳನು ಲಿಖಿಸಿದೆ ಗುರುವೆ ಕೊಂಡಾಡಿ ॥ ೧೪ ॥

ಮಾಯಾ ವೀ ಜಗವೆಂದು ನುಡಿಯುತೆ ।
ಕಾಯ ಸೌಖ್ಯವೆ ನಿತ್ಯವೆಂದಾ ।
ಹೇಯ ನಟನೆಗಳನ್ನೆ ಸೋಲಿಸಿ **ತರ್ಕತಾಂಡವದಿ** ॥
ಜೀಯ ಪರಿಪರಿ ಬಿರುದ ಪಡೆದುಮ ।
ಜೇಯನೆನಿಸುತ **ದ್ವೈತಮತವೇ** ।
ನ್ಯಾಯವಾದುದ ದೆಂದು ಜಯಭೇರಿಯನು ಹೊಡೆಯಿಸಿದೆ ॥ ೧೫ ॥

ವಂದ ನೀಯನೆ ವಿಜಯನಗರದಿ ।
ಬಂದಿರಲ್ 'ಕುಹುಯೋಗ' ಭೂಪಗೆ ।
ಹೊಂದದಂದದಿ ಮಾಡಿ ಕೃಷ್ಣ ನೃಪಾಲನನು ಸಲಹಿ ॥
ಅಂದು ನೀಂ ನೆರವಾದುದಕೆ ನೃಪ ।
ತಂದು ರತ್ನದರಾಶಿಯಂ ಬಿಡ ।
ದೊಂದೆರೀತಿಯ ಲೆರೆದು ಸಿಂಹಾಸನವ ನೊಲಿದಿತ್ತ ॥ ೯೬ ॥

ಇಂತು ಮಹಿಮೆಗಳನು ಗಣಿಸ ಲ ।
ನಂತವಾಗಿಯೆ ತೋರಿಹರು ನಾ ।
ನೆಂತು ಪೊಗಳಲಿ ಗುರುವನಣುವಿಂಗಣುವು ತೃಣಸಮನು ॥
ಸಂತತೊದಲ್ನುಡಿ ಸ್ವಲ್ಪ ವಾದರು ।
ಸಂತಸದಿ ಶಿಶುವಾಕ್ಯವನು ಪಿತ ।
ನಂತರಂಗದಿ ತಿಳಿವ ತೆರೆದೊಳು ಗ್ರಹಿಸಿ ಪಾಲಿಪುದು ॥ ೯೭ ॥

ಮೂರು ಜನುಮದ ರಾಯಚರಿತೆಯ ।
ಚಾರು ನವವಿಧ ಭಕ್ತಿಯಿಂದಲಿ ।
ಸಾರಿಪೇಳದೆ ನಿದನು ನಿಶ್ಚಲ ಮನದಿ ಕೇಳ್ವರಿಗೆ ॥
ಘೋರಪಾಪದ ಭಯವು ತೋರದು ।
ಪಾರಿಪೋಪುದು ವೈರಿವರ್ಗವು ।
ವಾರಿಜಾಕ್ಷನ ಕರುಣವಪ್ಪುದು ಗುರುಕೃಪೆಯಸಹಿತ ॥ ೯೮ ॥

ಸೊಲ್ಲುಸೊಲ್ಲಿಗೆ ರಾಘವೇಂದ್ರನೆ ।
ಎಲ್ಲ ನಮಗೆಂದೆಂಬ ಸುಜನರಿ ।
ಗಿಲ್ಲ ಮುಂದಿನ ಜನುಮದಲಿ ತಾಯ್ಮೊಲೆಯ ನುಂಬುವುದು ॥
ಎಲ್ಲಿಕರೆದರು ಬರುವ ಭಕುತರಿ ।
ಗೆಲ್ಲಪುಣ್ಯವ ನೀವ ತನ್ನಯ ।
ಸಲ್ಲಲಿತ ಚರಣಾಬ್ಜ ಭಜಕರ ನೆಂದು ಬಿಟ್ಟಗಲ ॥ ೯೯

ಏಳುನೂರ್ಬರಿಸಗಳು ಗುರುಗಳು ।
ಕೋಲಜಾ ತೀರದಲಿ ಮಹಿಯೊಳು ।
ಮೇಲೆನಿಸ ಬೃಂದಾವನದಿ ನೆಲೆಗೊಂಡು ನಿಂತಿಹರು ॥
ಓಲಗವ ಕೊಳುತಿಹರು ನರಹರಿ ।
ಲೀಲೆಗಳ ಮಹಿಮೆಗಳ ತೋರಿಸಿ ।
ಶೀಲರಿಗೆ ಸಕಲೇಷ್ಟಗಳ ಕೊಡುತಿಹರು ದಿನದಿನದಿ ॥ ೧೦೦ ॥

ದೇಶದೇಶದ ವೈಷ್ಣವೋತ್ತಮ ।
ರೇಸೊಜನ ಕಲೆಯುವರು ಶ್ರಾವಣ ।
ಮಾಸದೊಳಾ ಗಾ ದಿನದಿ **ಗುರ್ವಾರಾಧನೆಗೆ** ಬಂದು ॥
ಶ್ರೀಶ ನರಹರಿ ಕೃಷ್ಣ ವೇದ ।
ವ್ಯಾಸ ಸೀತಾರಾಮ ಗುರುಗಳಿಃ ।
ವಾಸವಾಗಿಹ ದಿವ್ಯ **ಬೃಂದಾವನವ** ಪೂಜಿಪರು ॥ ೧೦೧ ॥

ಶ್ರೀಷ್ಠ ಗುರುಬೃಂದಾವನವಜನ ।
ವಿಟ್ಟು ಪೂಜೆಯಗೈಯೆ ಮಕ್ಕಳಿಃ ।
ಪುಟ್ಟದೊಡೆನೆಯೆ ಗುರುಸುನಾಮವ ನಿಟ್ಟು ಮೋದಿಪರು ॥
ಶಿಷ್ಟರೆಲ್ಲರು ಪದದ ಕಾಣಿಕೆ ।
ಕೊಟ್ಟು ಯೋಗ ಕ್ಷೇಮ ಲಾಭವ ।
ಕಟ್ಟುವರು ಸ್ವಜ್ಞಾನಕೋಶದೊಳಿಟ್ಟು ಭಕುತಿಯಲಿ ॥ ೧೦೨ ॥

ದುಷ್ಟಗ್ರಹ ಬಾಧೆಗಳು ಬಾರವು ।
ಮುಟ್ಟ ಲರಿಯವು ಹಾವು ಚೇಳ್ಗಳು ।
ಕೆಟ್ಟಮಾರಿಯು ಸರಿದುಪೋಗುವ ಳಾಗದಪಮೃತ್ಯು ॥
ಕುಷ್ಠ ರೋಗವ ರಾಜಯಕ್ಷ್ಮವ ।
ಮೆಟ್ಟಲಹುದೈ ಗುರುವ ಸೇವಿಸೆ ।
ಅಟ್ಟಹಾಸದಿ ಬಂದುಸೇರುವ ಳಿಂದಿರೆಯು ಗೃಹವ ॥ ೧೦೩ ॥

ಕುರುಡನಿಗೆ ಕಣ್ ಕಿವುಡನಿಗೆ ಕಿವಿ ।
ಬರಡುಮಡದಿಗೆ ಮಗುವು ಕುಂಟಿಗೆ ।
ಎರಡು ಕಾಲ್ಗಳು ಮೂಕನಿಗೆ ಮಾತೊಡನೆ ಬರುತಿಹವು ॥
ನಿರತ ಗುರುವಿನ ಸ್ತವನ ಮಾಡಲು ।
ಪರಿಮಳಾಚಾರ್ಯರನು ನುತಿಸಲು ।
ಕರುಣಿ ಗುರುವರ ರಾಘವೇಂದ್ರನು ಭಕ್ತ ಸುರಧೇನು ॥ ೧೦೪ ॥

ಮೂರು ಜನುಮದ ಪಾಪಹರಚಿತ ।
ಮೂರು ತಾಪಗಳಟ್ಟಿ ಬಾರವು ।
ಮೂರು ಕಾಲದಿ ಜಪಿಸಿ ಹರಿ ಅಜ ಹರರು ಹರ್ಷಿಪರು ॥
ಮೂರು ವರ್ಗದ ಫಲವು ಲಭ್ಯವು ।
ಮೂರು ಪ್ರಾರಬ್ಧಗಳ ದೋಷವು ।
ಬಾರದಿರುವವು ಈ ಚರಿತ್ರೆಯ ನೋದಿ ಕೇಳ್ವರಿಗೆ ॥ ೧೦೫ ॥

ಜ್ಞಾನ ಭಕ್ತಿ ಸುಮುಕ್ತಿ ಗೋಸುಗ ।
ಧ್ಯಾನಶುದ್ಧ ಶತಾಷ್ಟ ಪದ್ಯಗ ।
ಳಾನುಪೇಳುತ ತುಳಸಿ ಮಂಜರಿ ಯೆಂದು ಗುರುಗಳಿಗೆ ॥
ಸಾನುರಾಗದೊಳರ್ಪಿಸಿವೆ ಬಹು ।
ಮಾನಿಪಂಡಿತರಿದನು ಪಠಿಸುತ ।
ಕಾಣಬಂದಾದೋಷ ತಿದ್ದುತ್ತುದ್ಧರಿಪು ದೆನ್ನ ॥ ೧೦೬ ॥

ಯೆನಗೆ ಜನಕನು ಶಂಕರಪ್ಪನು ।
ವಿನಯವತಿ ಲಕ್ಷ್ಮಮ್ಮ ಜನನಿಯು ।
ಅನುಜರಾರ್ವರಿಗ ಗ್ರಜನು ಶ್ರೀಮಧ್ವಕಿಂಕರನು ॥
ವಿನುತ ವರಜಮದಗ್ನಿ ಗೋತ್ರಜ ।
ನಿನಿತು ದೇವೇಂದ್ರಾಖ್ಯಭೂಸುರ ।
ನನುನಯದಿ ಪೇಳಿದನು ಶ್ರೀಗುರುಚರಿತೆಯನು ಮುದದಿ ॥ ೧೦೭ ॥

ಧರೆಗೆವದನದವೋಲು ಮೆರೆಯುವ ।
ಪುರವು ಕೊರಿಗನೂರು ಕೊರ್ವರ್ನನ ।
ಕರುಣದಿಂ ಶ್ರೀ ಶಾಲಿವಾಹನದಷ್ಟದಶಶತದ ॥
ವರುಷಮೇಲರ ವತ್ತು ಯದರಲಿ ।
ಚರಿತ ಬಹುಧಾನ್ಯೈಕ ಶ್ರಾವಣ ।
ಗುರುದಿನದೊಳಿದು ಪೂರ್ಣವಾಯಿತು ಸರ್ವಶುಭದಿಂದ ॥ ೧೦೮

ಮಂಗಳವು ಶ್ರೀಮೂಲರಾಮಗೆ ।
ಮಂಗಳವು ಶ್ರೀಜನಕಪುತ್ರಿಗೆ ।
ಮಂಗಳವು ಶ್ರೀಹನುಮಭೀಮಗೆ ಮಧ್ವರಾಯರಿಗೆ ।
ಮಂಗಳವು ಪ್ರಹ್ಲಾದರಾಯಗೆ ।
ಮಂಗಳವು ಶ್ರೀವ್ಯಾಸಮೌನಿಗೆ ।
ಮಂಗಳವು ಮದ್ಗುರುವರ ಶ್ರೀ ರಾಘವೇಂದ್ರನಿಗೆ ॥

ರಾಘವೇಂದ್ರಗುರುಚರಿತೆ ಸಂಪೂರ್ಣವು.

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀ ಶ್ರೀ ಶ್ರೀ ॥

## PUBLISHERS

**Sri K. V. Bidarahalli,**
Special Auditor of C. S.,
SIRSI (N K.)

**Sri L. K. Gad, B A.,**
Special Auditor of C. S.,
HASSAN

**Sri K. R. Radhakrishnamoorthy,** B.A.B.L.,
Land Lord,
HOSPET - BELLARY

**Sri R. Subbiah,** B. A.,
Land Lord,
CHINTAMANI KOLAR

**Sri Raghavendra Rao, (R. N. Kulakarni)**
Land Lord,
MASARAKAL - RAICHOOR